# ಬಾಳಿನಲ್ಲಿ ಬೆಳಕು



ಅರವಿಂದ ಗ್ರಂಥ ಮಾಲೆ

ಹಲಸಂಗಿ



ಆರವಿಂದ ಗ್ರಂಥಮಾಲೆಯ ೨ನೇಯ ಕುಸುಮ

# ಬಾಳಿನಲ್ಲಿ ಬೆಳಕು.

( ಮಹರ್ಷಿ ಟಾಲ್‌ಸ್ಟಾಯರ ಆತ್ಮ ಕಥನ. )



ಅನುವಾದಕರು:—

**ಮಧುರಚೆನ್ನ ಮತ್ತು ಸಿಂಪೀ ಲಿಂಗಣ್ಣ.**

ಬೆ. ] ಹತ್ತಾಣೆ. [೧೯೩೬.

ಪ್ರಕಾಶಕರು:—
[illegible]. ಡಿ. ಅಕ್ಕಿ. ಬಿ. ಎ., ಎಲೆಲ್. ಬಿ.
" ಅರವಿಂದ ಗ್ರಂಥಮಾಲಾ "
ಹಲಸಂಗಿ.
ಜಿಲ್ಲಾ:- ವಿಜಾಪೂರ.

ಸಂಪಾದಕರು
" ಮಧುರಚೆನ್ನ "

ಮುದ್ರಕರು:-
ಎನ್. ಬಿ. ಕೇಂದೂರ,
ದಿ ಬಾಗಲಕೋಟ ಪ್ರಿಂಟಿಂಗ್ ವರ್ಕ್ಸ್,
ಬಾಗಲಕೋಟ.

# ಬಾಳಿನಲ್ಲಿ ಬೆಳಕು.

## ಅಭಿವಾದನ

ಈ ಪುಸ್ತಕದ

ಮುದ್ರಣದ ವೆಚ್ಚವನ್ನು

ತಾವು ವಹಿಸುವದಾಗಿ ಅಭಿವಚನವಿತ್ತ

ಮೈಂದರ್ಗಿಯ

**ಶ್ರೀ ಗುರುಪಾದೇಶ್ವರ ತತ್ವಜ್ಞಾನ ಮಂದಿರಕ್ಕೆ**

ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

## ಮುಂದಿನ ಪುಸ್ತಕ




ಜುಲೈಯಲ್ಲಿ ಪ್ರಕಟವಾಗುವದು.

# ನಮ್ಮ ಮಾತು.

ಯೋಗೀಶ್ವರ ಅರವಿಂದರು ಅನ್ನುವಂತೆ— " ನಮ್ಮ ನಾಡಿನ ಹೀನದಶೆಗೆ ಪಾರತಂತ್ರ್ಯವಾಗಲಿ, ಧರ್ಮಹೀನತೆಯಾಗಲಿ, ದ್ರಾರಿದ್ರ್ಯವಾಗಲಿ ಕಾರಣವಾಗಿರದೆ ವಿಚಾರ ಶಕ್ತಿಯ ಅಭಾವವೇ ಅದಕ್ಕೆ ಮುಖ್ಯ ಕಾರಣವಾಗಿದೆ. ಪಲವರಿಗೆ ವಿಚಾರ ಮಾಡುವ ಶಕ್ತಿಯೇ ಇಲ್ಲ; ಆ ಶಕ್ತಿಯಿದ್ದ ಕೆಲವರಿಗೆ ವಿಚಾರ ಮಾಡುವ ಇಚ್ಛೆಯೇ ಇಲ್ಲ. ಪಾಶ್ಚಾತ್ಯರನ್ನು ನೋಡಿರಿ, ಅವರು ಪ್ರಗಾಢವಾದ ವಿಚಾರ ಶಕ್ತಿಯ ಬಲದಿಂದ ಜಗತ್ತನ್ನೇ ನಡುಗಿಸುತ್ತಿದ್ದಾರೆ. ಅಲ್ಲಿ ಒಬ್ಬ ಕೂಲಿಕಾರನೂ ಕೂಡ ಅತ್ಯಂತ ಮಹತ್ವದ ವಿಷಯಗಳನ್ನು ಕುರಿತು ವಿಚಾರ ಮಾಡುವುದಕ್ಕೆ ಸಮರ್ಥನಿರುತ್ತಾನೆ. ಆದರೆ ನಮ್ಮಲ್ಲಿ ನೋಡಿರಿ, ತೀರ ಸಾಮಾನ್ಯ ವಿಷಯಗಳ ಬಗ್ಗೆ ಮಾತ್ರ ವಿಚಾರ ಮಾಡುವುದಕ್ಕೆ ಇವರಿಗೆ ತವಕವಿರುತ್ತದೆ. ಪಡುವಣದ ನಾಡಿನಲ್ಲಿ ಮಹಾ ವಿಧ್ವಂಸದ ಯುಗವೇ ಆರಂಭವಾಗಿದೆಯೆಂದು ನಮ್ಮವರಿಗೆ ಅನಿಸುತ್ತದೆ. ಆದರೆ ವಸ್ತುಸ್ಥಿತಿಯು

ಬೇರೆಯೇ ಆಗಿದೆ. ಅಲ್ಲಿ ನವರಚನೆಗಾಗಿ ಪುರಾತನವು ವಿಧ್ವಸ್ತ ವಾಗುತ್ತಲಿದೆ. ಅಧ್ಯಾತ್ಮದಲ್ಲಿಯೂ ಕೂಡ ಅವರು ಶೀಘ್ರದಲ್ಲಿಯೇ ಮುಂದುವರಿಯುವದರಲ್ಲಿದ್ದಾರೆ. ''

ಮೇಲ್ಕಾಣಿಸಿದ ದಿವ್ಯೋಪದೇಶಕ್ಕೆ ನಮ್ಮ ನಾಡು ಕಿವಿಗೊಡು ವಂತಾಗಬೇಕೆಂಬುದೇ ನಮ್ಮ ಮನೀಷೆ. ಈ ಧ್ಯೇಯಕ್ಕನುಸರಿಸಿ ಪ್ರಸ್ತುತ ಗ್ರಂಥವನ್ನು ಕನ್ನಡಿಗರ ದೃಷ್ಟಿಪಥಕ್ಕೆ ತಂದಿದ್ದೇವೆ. ಆಚಾರದಲ್ಲಿ ಮಡಿ ಮೈಲಿಗೆಯನ್ನು ಪಾಲಿಸುವಂತೆ ವಿಚಾರದಲ್ಲಿಯೂ ಬೇರೆಯವರ ಗಾಳಿಯನ್ನು ಬಡಿಸಿಕೊಳ್ಳಲಿಚ್ಛಿಸದ ಕರ್ಮಠತನವು ಜಗ ದ್ವ್ಯಾಪಿಯಾಗಿಯೇ ಇದೆಯೆಂದು ಹೇಳಬಹುದು. ಆದರೆ ಪಶ್ಚಿಮ ದೇಶದಲ್ಲಿ ' ರ್‍ಯಾಶನ್ಯಾಲಿಜಮ್ ' ಅಥವಾ 'ತರ್ಕ ಶುದ್ಧ ವಿಚಾರವಾದ'ವು ಪ್ರಚಾರವಾಗಹತ್ತಿದಾಗಿನಿಂದ ಅಲ್ಲಿ ವೈಚಾರಿಕ ಸಂಕೋಚವು ಬಯ ಲಾಗುತ್ತ ನಡೆದಿದೆ. ಆದರೆ ನಮ್ಮಲ್ಲಿ ಮಾತ್ರ ವಿಚಾರ ಚಕ್ರಕ್ಕೆ ಇನ್ನೂ ಚಾಲನೆಯೇ ಸಿಕ್ಕಿಲ್ಲವೆಂದು ಹೇಳಬಹುದು. " ತಮಗೆ ತಿಳಿಯುವದಿಲ್ಲ, ಇನ್ನೊಬ್ಬರದು ಕೇಳುವದಿಲ್ಲ '' ಎನ್ನುವಂಥ ಅವಸ್ಥೆಯು ಬಹಳ ಘಾತುಕ ವಾದದ್ದೆಂದು ಹೇಳಬಹುದು. ಪಡುವಣ ನಾಡಿನ ಘನವಿಚಾರಿಗಳ ಲ್ಲೊಬ್ಬರದಾದ ಈ ಪ್ರಸ್ತುತ ಪುಸ್ತಕದ ಅವಲೋಕನದಿಂದ ನಮ್ಮವರಿಗೆ ಅಲ್ಲಿ ನಡೆದ ವೈಚಾರಿಕ ಝುಂಝಾವಾತದ ಕಲ್ಪನೆಯಾದರೂ ಆಗದಿರ ದೆಂದು ನಮ್ಮ ಭಾವನೆ. ಜಗತ್ತಿಗೇ ಬುದ್ಧಿಯನ್ನು ಕಲಿಸಿ ಕೊಡಲು ಹವಣಿಸುವ ವಿಚಾರವಾದಿಗಳಿಗೂ ಕೂಡ ಈ ಪುಸ್ತಕವು ಬುದ್ಧಿಗಲಿ ಸುವಂತಹದಾಗಿದೆ.

ಇನ್ನು ಕನ್ನಡ ಅನುವಾದದ ಬಗೆಗೆ ಒಂದೆರಡು ಮಾತುಗಳನ್ನು ಹೇಳುವ ಅಗತ್ಯವಿದೆ. ಕೇವಲ ಒಂದು ಶಬ್ದವನ್ನೂ ಸಹ ಬಿಡದೆ ಇದ್ದ ಕ್ಕಿದ್ದಂತೆ ಭಾಷಾಂತರಿಸಿದಲ್ಲಿ ಪರನಾಡಿನ ಎಷ್ಟೋ ಅಪರಿಚಿತ ಸಂಗತಿ ಗಳ ಮೂಲಕ ವಾಚಕರಿಗೆ ಗದ್ದಲ ಹಿಡಿಯ ಬಹುದೆಂದು ಅಂಥ ಕೆಲವು ಮಾತುಗಳನ್ನು ಸಂಕ್ಷೇಪಿಸಲಾಗಿದೆ. ಮತ್ತು ಬಿಟ್ಟರೆ ನಡೆಯಬಹು

ವೆಂದೆನಿಸಿದ ಕೆಲವು ವಿಚಾರ ಪುನರುಕ್ತಿಗಳನ್ನು ಬಿಟ್ಟುಗೊಟ್ಟಿದೆ. ಉದಾಹರಣೆಗಾಗಿ, ಮೊದಲನೇ ಪ್ರಕರಣದೊಳಗಿನ ಡಿಮೆಟ್ರಿಯ ನರ್ತನ ಸಮಾರಂಭದ ಪ್ರಸಂಗವನ್ನು ಬಿಟ್ಟು ಕೊಟ್ಟಿದ್ದರಿಂದ ಮೂಲ ವಿಚಾರ ಪ್ರವಾಹಕ್ಕೇನೂ ತಡೆಯುಂಟಾಗಿಲ್ಲವೆಂದೇ ನಮಗೆ ಅನಿಸುತ್ತದೆ. ಆರನೇ ಪ್ರಕರಣದಲ್ಲಿ ಸಾಲೋಮನ್ನನ ದೀರ್ಘ ಪ್ರವಚನವನ್ನು ಸಂಕ್ಷಿಪ್ತಗೊಳಿಸಿದ್ದರಿಂದಲೂ ಮೂಲ ಪ್ರವಾಹಕ್ಕೆ ಬಾಧೆಯುಂಟಾಗಿಲ್ಲವೆಂದೇ ತೋರುತ್ತದೆ. ಏಳನೇ ಪ್ರಕರಣದಲ್ಲಿ ಹೇಳಿದ ನಾಲ್ಕು ಬಗೆಯ ಜೀವನದ ವಿಷಯವೇ ಮೂಲದಲ್ಲಿ ಮುಂದೆ ಮೂರು ನಾಲ್ಕು ಸಾರೆ ಬರುತ್ತದೆ. ಆದರೆ ಅನುವಾದದಲ್ಲಿ ಕೆಲವೆಡೆಗೆ ಅದನ್ನು ಹಾರಿಸಿಬಿಟ್ಟಿದೆ. ಹದಿನಾಲ್ಕನೇ ಪ್ರಕರಣದೊಳಗಿನ ಕ್ರೈಸ್ತ ಧರ್ಮದ ಕ್ರಿಯಾಚಾರಗಳ ವಿಷಯದಲ್ಲಿದ್ದ ಮಾತುಗಳು ನಮ್ಮವರಿಗೆ ತೀರ ಅಪರಿಚಿತವಾಗಿರುವದರಿಂದ ಅವುಗಳ ಲ್ಲಿಷ್ಟೋ ಕಡಿಮೆ ಮಾಡಲಾಗಿದೆ. ಹೀಗೆಯೇ ಇನ್ನೂ ಹಲವೆಡೆಗಳಲ್ಲಿ ಮಾಡಿದೆ. ಆದರೂ ಅವೆಲ್ಲವುಗಳು ಇದ್ದೇ ತೀರಬೇಕೆಂದು ವಿಚಾರಿಗಳು ಅಭಿಪ್ರಾಯವನ್ನು ಕೊಟ್ಟರೆ ದ್ವಿತೀಯಾವೃತ್ತಿಯಲ್ಲಿ ಹಾಗೆ ಮಾಡುವೆವೆಂದು ಭರವಸವನ್ನು ಕೊಡುತ್ತೇವೆ.

ಅನುವಾದಕರು ಇಂಗ್ಲಿಷಿನಲ್ಲಿ ವ್ಯುತ್ಪನ್ನಮತಿಗಳಲ್ಲದಿದ್ದರೂ ಅವರಿಗೆ ಭರತಖಂಡದ ಬೇರೆ ಬೇರೆ ಭಾಷೆಗಳೊಳಗಿನ ಅನುವಾದಗಳಿಂದ ತಕ್ಕಷ್ಟು ನೆರವು ಸಿಕ್ಕಿದೆಯೆಂದು ಹೇಳಿಬಿಟ್ಟರೆ ಸಾಕೆನ್ನುತ್ತೇವೆ.

ಪ್ರಸ್ತುತ ಪುಸ್ತಕವನ್ನು ಅಲ್ಪಾವಧಿಯಲ್ಲಿ ಅತಿ ಪರಿಶ್ರಮದಿಂದ ಮುದ್ದಾಗಿ ಮುದ್ರಿಸಿ ಕೊಟ್ಟಿದ್ದರಿಂದ ಬಾಗಲಕೋಟ ಪ್ರೆಸ್ಸಿನ ಒಡೆಯರಿಗೂ, ಮ್ಯಾನೇಜರರಾದ ಶ್ರೀಮಾನ್ ಬಂಡರಗಲ್ಲ ಮಹಾದೇವಪ್ಪನವರಿಗೂ ನಾವು ತುಂಬಾ ಉಪಕೃತರಾಗಿದ್ದೇವೆ.

ಸರ್ವಜನ ವಿನಮ್ರ,

**ಸಂಪಾದಕ ಮತ್ತು ಪ್ರಕಾಶಕರು.**

ಓಂ ಶ್ರೀ ಓಂ

# ಪರಿಚಯ.



ಇದೀಗ ನಾವು ನಮ್ಮ ನಾಡಿನ ಅಣ್ಣಂದಿರಿಗೆ ಪರಿಚಯ ಮಾಡಿ ಕೊಡಬೇಕಾದದ್ದು ಎರಡು ವಸ್ತುಗಳ ಬಗೆಗೆ. ಅವುಗಳಲ್ಲಿ ಮೊದಲನೆಯದು ಪ್ರಸ್ತುತ ಗ್ರಂಥ; ಇನ್ನು ಎರಡನೆಯ ದಿವ್ಯವಸ್ತುವೆಂದರೆ ಈ ಗ್ರಂಥದ ಕೃರ್ತ.

ಮೊದಲಿಗೆ ನಾವು ಗ್ರಂಥದ ಬಗ್ಗೆ ಪರಿಚಯ ಮಾಡಿಕೊಟ್ಟು, ಬಳಿಕ ಗ್ರಂಥಕರ್ತರಾದ ಮಹರ್ಷಿ ಟಾಲ್‌ಸ್ಟಾಯ್ ಅವರ ಬಗ್ಗೆ ಇನ್ನೊಂದು ಸ್ವತಂತ್ರ ಪ್ರಕರಣವನ್ನು ಇದರ ಮುಂದೆಯೇ ಸೇರಿಸಲಿಚ್ಛಿಸುವೆವು.

"ಬಾಳಿನಲ್ಲಿ ಬೆಳಕು" ಎಂಬ ಹೆಸರನ್ನು ಈ ಗ್ರಂಥಕ್ಕೆ ಅನುವಾದಕರಾದ ನಾವು ಇಟ್ಟಿದ್ದೇವೆ. ಮೂಲದಲ್ಲಿ ಮಹರ್ಷಿ ಟಾಲ್‌ಸ್ಟಾಯರು ತಮ್ಮ ಈ ಗ್ರಂಥಕ್ಕೆ "**A confession**" (ಗುಣದೋಷ ಕಥನ) ಎಂದು ಹೆಸರಿಟ್ಟಿದ್ದಾರೆ. "ಜೀವನದ ಉದ್ದೇಶವೇನು" ಎಂಬ ಮಹಾಪ್ರಶ್ನದ ಉತ್ತರವನ್ನು ಹುಡುಕಿಕೊಳ್ಳುವುದಕ್ಕೆ ಟಾಲ್‌ಸ್ಟಾಯರು ಬಹು ವಿಧದ ಅನುಶೀಲಗಳನ್ನು ನಡೆಯಿಸಿ, ಎಲ್ಲಿಯೂ ಸಂಶಯ ನಿವೃತ್ತಿಯಾಗದೆ ಕೊನೆಗೆ ಅಶಿಕ್ಷಿತರಾದ ಸಾಮಾನ್ಯ ಜನರ ಶುದ್ಧ ಸರಳ ಜೀವನದ ನಿರೀಕ್ಷಣದಿಂದಲೇ ಅವರಿಗೆ ಸಮಾಧಾನವಾಯಿತು. ಪ್ರಶ್ನವೂ ಜೀವನಕ್ಕೆ ಸಂಬಂಧಿಸಿದ್ದು; ಉತ್ತರವೂ ಜೀವನದ ಕ್ಷೇತ್ರದಲ್ಲಿಯೇ ಸಿಕ್ಕದ್ದು. ಹೀಗೆ ಎರಡು ಕಾರಣಗಳಿಂದ— ಇಷ್ಟೇ ಏಕೆ, 'ತನ್ನ ಜೀವನವು ಶುದ್ಧವಾಗುವವರೆಗೆ ಸತ್ಯದ ದರ್ಶನವಾಗಲಾರದು' ಎಂಬ ದಿವ್ಯಮಂತ್ರವು ಪ್ರಸ್ತುತ ಗ್ರಂಥದ

ಡಂಗುರಾಗಿರುವವರಿಂದ— ಈ ಮೂರನೆಯ ಕಾರಣದಿಂದಲೂ ಸಹ ಈ ಪುಸ್ತಕಕ್ಕೆ " ಬಾಳಿನಲ್ಲಿ ಬೆಳಕು" ಎಂಬ ಹೆಸರನ್ನಿಡುವ ಪ್ರವೃತ್ತಿಯು ನಮಗೆ ಉಂಟಾಯಿತು.

ಈ ಗ್ರಂಥದ ಸಂಕ್ಷಿಪ್ತ ಸಾರಾಂಶವನ್ನು ಹೇಳಿ ಬಳಿಕ ಅದರೊಳಗಿನ ಕೆಲವು ಬೀಜ ಮಾತುಗಳ ಬಗ್ಗೆ ಚರ್ಚಿಸುವೆವು.

(೧) ಟಾಲ್‌ಸ್ಟಾಯರು ತಾವು ಚಿಕ್ಕಂದಿನಲ್ಲಿ ಧಾರ್ಮಿಕ ಪ್ರವೃತ್ತಿಯುಳ್ಳವರಾಗಿದ್ದು, ಯೌವನದಲ್ಲಿ ವಿಶ್ವವಿದ್ಯಾಲಯದ ಉಚ್ಚ ಶಿಕ್ಷಣದ ಮೂಲಕ ಆ ವಿಶ್ವಾಸವನ್ನು ಕಳೆದುಕೊಂಡರು. ತರ್ಕಶುದ್ಧವಿಚಾರದ ಇದಿರಿಗೆ ಪರಂಪರಾಗತ ಶ್ರದ್ಧೆಯು ತಡೆದು ನಿಲ್ಲಲಾರದು. (೨) ಬಳಿಕ ಅವರು ತನ್ನಂಥ ಪ್ರತಿಭಾವಂತ ಲೇಖಕರ ಸಹವಾಸವನ್ನು ಒದಗಿಸಿಕೊಂಡಾಗ ತನ್ನ ಹಾಗೂ ಅವರ ಬಿಂಕವು ಹಾಸ್ಯಾಸ್ಪದವಾದದ್ದೆಂದು ಟಾಲ್‌ಸ್ಟಾಯರಿಗೆ ಕಂಡು ಬಂದದ್ದರಿಂದ ತಮ್ಮ ಬಗ್ಗೆ ತಮಗೆ ತಾತ್ಸಾರ ಹುಟ್ಟಿತು. (೩) ಆ ಮೇಲೆ ಅವರಿಗೆ 'ಯಾವುವರದೇ ಆಗಲಿ, ಅವರ ಉಪಯೋಗವೇನು ?' ಎಂಬ ಪ್ರಶ್ನವು ಕಾಡಹತ್ತಿತು. ಯಾವವರ ಪ್ರಯೋಜನವು ಏನೆಂಬುದನ್ನು ತಾನೇ ಅರಿಯದವನು ತನ್ನ ಗ್ರಂಥಗಳಿಂದಾಗಲಿ ಕಾರ್ಯಗಳಿಂದಾಗಲಿ ಯಾರಿಗೇನು ಹಿತಮಾಡಬಲ್ಲನು? ಎಂದು ಅವರು ಕೂಟ ಪ್ರಶ್ನದಲ್ಲಿ ತೊಡಕಿಕೊಂಡದ್ದರಿಂದ ಅವರ ಜೀವನವು ಕುಂಟಾಡಹತ್ತಿತು. (೪) ಕೆಲದಿನ ಈ ಚಕ್ರವ್ಯೂಹದೊಳಗೆ ಸುತ್ತಾಡುತ್ತ ಸುತ್ತಾಡುತ್ತ ಅವರಿಗೆ ಸರ್ವ ಸಂಹಾರಕವಾದ ಮರಣದ ಪ್ರಶ್ನವು ಹಿಡಿದುಕೊಳ್ಳಲು, ಮಹರ್ಷಿಗಳು ಜೀವನಕ್ಕೇ ಹೇಸಿದರು. 'ಎಲ್ಲಾ ವ್ಯರ್ಥ! ಎಲ್ಲಾ ವ್ಯರ್ಥ!' ವೆಂದೆನಿಸಿ ಆತ್ಮಹತ್ಯಮಾಡಿಕೊಳ್ಳಲಿಕ್ಕೆ ಪ್ರಬಲವಾಗಿ ಪ್ರಯತ್ನಿಸಿದರು. (೫) ಆದರೂ ದುಡುಕದೆ ತಮ್ಮ ಪ್ರಶ್ನದ ಉತ್ತರವನ್ನು ಹುಡುಕಿಕೊಳ್ಳುವುದಕ್ಕೆ ಮಾನವ ಜ್ಞಾನದ ಶಾಖೋಪಶಾಖೆಗಳನ್ನೆಲ್ಲ ಪರಿಶೀಲಿಸಲಿಕ್ಕೆ ನಿಂತರು. ಆಧುನಿಕ ಭೌತಿಕ ಶಾಸ್ತ್ರವು ಇವರ ಪ್ರಶ್ನಕ್ಕೆ ಪ್ರಶ್ನವೆಂದೇ ಸ್ವೀಕರಿಸಲಿಲ್ಲ. ನನ್ನ ರಾಜ್ಯದಲ್ಲಿ

ಈ ಮಾತನ್ನೆತ್ತಬೇಡವೆಂದು ಅದು ಹೇಳಿತು. (೬) ಅಲ್ಲಿಂದ ಅವರು ಸಾಕ್ರೇಟಿಸ್, ಬುದ್ಧದೇವ ಮೊದಲಾದ ಜ್ಞಾನಿಗಳ ತಾತ್ವಿಕ ಗ್ರಂಥಗಳಿಗೆ ಮೊರೆಯಿಡಲು ಅಲ್ಲಿ ಲಭಿಸಿದ್ದೂ ಅದೇ. "ಜೀವನವು ದುಃಖಮಯವಾಗಿದೆ!" ಎಂಬುದೇ ಈ ಶಾಸ್ತ್ರಗಳ ಉಪದೇಶ. ಟಾಲ್‌ಸ್ಟಾಯರಿಗೆ ಇದರಿಂದ ಉತ್ತರವು ಸಿಕ್ಕಂತಾಗಲಿಲ್ಲವೆಂಬುದಿಷ್ಟೇ ಅಲ್ಲ, ತಿರುಗಿ ಕೇಳಿದರೆ ಅವರ ಬೆಂಕಿಯಂಥ ಪ್ರಶ್ನಕ್ಕೇ ಇನ್ನೊಂದಿಷ್ಟು ಕಲ್ಲೆಣ್ಣೆಯನ್ನು ಸುರುವಿದಂತಾಯಿತು. (೭) ಆಗ ಅವರು ಪುಸ್ತಕಗಳ ರಾಜ್ಯವನ್ನು ಪರಿತ್ಯಜಿಸಿ ಜನರ ಜೀವನವನ್ನು ನಿರೀಕ್ಷಿಸಲಾರಂಭಿಸಲು, ಮೊದಲಿಗೆ ತನ್ನ ವರ್ಗದ ಸುಶಿಕ್ಷಿತ ಶ್ರೀಮಂತರ ಜೀವನದ ಕಡೆಗೆ ಲಕ್ಷ್ಯವು ಹೋಯಿತು. ಆದರೆ ಅಲ್ಲೇನಿದೆ? ಉಂಡಾಡಿಗರ ಜೀವನವು ಜೀವನವೇ ಅಲ್ಲನೆಂದು ಅವರಿಗೆ ಅನಿಸಿತು. ನಿಜವಾಗಿ ಜೀವಿಸುವ ಸಾಮಾನ್ಯ ಜನರ ಮೇಲೆ ಇಂಥವರು ಉಣ್ಣೆಯಂತೆ ಬಾಳಿ ಬದುಕುವರು. (೮) ಆದ್ದರಿಂದ ಈ ಪರೋಪಜೀವಿಗಳ ಗೊಡವೆಯನ್ನು ಬಿಟ್ಟು ನಿಜವಾಗಿ ತಮ್ಮ ಜೀವನವನ್ನು ತಾವೇ ನಿಸ್ತರಿಸುತ್ತಿರುವ ಸಾಮಾನ್ಯ ಜನತೆಯ ಕಡೆಗೆ ಮಹರ್ಷಿಗಳು ತಮ್ಮ ಲಕ್ಷ್ಯವನ್ನು ಹೊರಳಿಸಿದರು. ಆಗ ಇವರು ಹುಡುಕುತ್ತಿದ್ದ ಜ್ಯೋತಿರ್ಮಯವಾದ ರತ್ನದ ಕಣಿಯು ಇದೇ ಎಂದು ಗೊತ್ತಾಯಿತು. (೯) ಸಾಮಾನ್ಯ ಜನತೆಯು ಬಾಳಿ ಬದುಕುತ್ತಿರುವುದು ತರ್ಕಶುದ್ಧ ವಿಚಾರದಿಂದಲ್ಲ, ವಿಚಾರಕ್ಕೆ ಬಹಿರ್ಭೂತವಾದ ಶ್ರದ್ಧೆಯೆಂಬುದರ ಆಧಾರದಿಂದ. ಆಗೆ ಮಹರ್ಷಿಗಳು ವಿಚಾರ ಮಾಡಿದ್ದು ಹೇಗೆಂದರೆ— "ತರ್ಕಶುದ್ಧ ವಿಚಾರವು ನನಗೆ ಸಾಯಲಿಕ್ಕೆ ಮನವೊಲಿಸಿತ್ತು. ಆದರೆ ನನ್ನ ವಿಚಾರಕ್ಕಿಂತ ಭಿನ್ನವಾದ ಇನ್ನಾವುದೋ ಒಂದು ಶಕ್ತಿಯು ನನಗೆ ಬದುಕಿ ಉಳಿಯುವ ಮೋಹವನ್ನು ಹುಟ್ಟಿಸಿ ನನ್ನನ್ನು ತನ್ನ ವಶಕ್ಕೆ ತೆಗೆದುಕೊಂಡಿದ್ದಿತು. ಈ ದುರ್ದಮನೀಯವಾದ ಶಕ್ತಿಯೇ ಪ್ರಾಣಾಧಾರವಾದ ಜೀವನಶಕ್ತಿಯು; ಅಥವಾ ಶ್ರದ್ಧೆಯೆಂದರೂ ಇದೇ." (೧೦) ಇಷ್ಟು ಗೊತ್ತಾದ ಮೇಲೆ ಟಾಲ್‌ಸ್ಟಾಯರು ಧಾರ್ಮಿಕ ಜನರ ಕಡೆಗೆ ತಮ್ಮ ಲಕ್ಷ್ಯವನ್ನು ಹೊರಳಿಸಿದ್ದು ಸ್ವಾಭಾವಿಕವೇ ಆಗಿದೆ. ಆದರೆ ಅವರೆಲ್ಲರೂ ಡಾಂಭಿಕರೆಂದು ಗೊತ್ತಾಗಲು ಸಾಮಾನ್ಯ ಜನರೇ

ಮಹರ್ಷಿಗಳಿಗೆ ಸಾಧುಸಂತರಂತೆ ಕಾಣಿಸಹತ್ತಿದರು. (೧೧) ಬಳಿಕ ಟಾಲ್‌ಸ್ಟಾಯರು ನಿರ್ಧರಿಸಿದ್ದೇನಂದರೆ— "ಸತ್ಯವನ್ನು ಕಾಣಬೇಕೆನ್ನುವವನು ಮೊದಲು ತನ್ನ ಕಣ್ಣನ್ನು ಹಸನುಮಾಡಿಕೊಳ್ಳಬೇಕು. ತನ್ನ ಜೀವನವನ್ನು ಅಶುದ್ಧವಾಗಿ ಉಳಿಯಗೊಟ್ಟು, ಮೇಲೆ ತನಗೆ ಸತ್ಯವು ತಿಳಿಯಬೇಕೆಂದು ಬಯಸುವವನು ಮೂರ್ಖನು. ಬಾಳುವೆಯ ಗುಟ್ಟನ್ನು ಅರಿಯಬೇಕೆನ್ನುವವನು ಬಾಳುವೆಗೇಡಿಗಳಾದ ಪರೋಪಜೀವಿಗಳನ್ನೂ, ಅಡ್ಡತಿಡ್ಡ ಜಿಗಿದಾಡಿ ಆತ್ಮಹತ್ಯ ಮಾಡಿಕೊಂಡು ಜೀವನಕ್ಕೆ ಅವಮಾನಗೊಳಿಸುವವರನ್ನೂ ಕಣ್ಣೆತ್ತಿ ಸಹ ನೋಡಬಾರದು. ತಮ್ಮ ಜೀವನವನ್ನು ಪವಿತ್ರವಾದ ವರವೆಂದು ಭಾವಿಸಿ, ಸ್ವತಃದ ಶ್ರಮದಿಂದ ಅದನ್ನು ಪೋಷಿಸಿ ಜೀವನ ನದಿಯನ್ನು ಈಸುತ್ತಿರುವವರನ್ನು ನೋಡಿ ಅವರಂತಾಗಲು ಪ್ರಯತ್ನಿಸಲಿಕ್ಕೇ ಬೇಕು." (೧೨) ಹೀಗೆ ಟಾಲ್‌ಸ್ಟಾಯರು ನಿಶ್ಚಯಿಸಿಕೊಂಡು ಅದರಂತೆ ಬಾಳತೊಡಗಲು, ಅವರಿಗೆ ಒಳಗೂ ಹೊರಗೂ ಕೂಡಿಯೇ ಸಮಸ್ತ ಜಗತ್ತು ಆನಂದಮಯವಾಗಿ ತೋರಹತ್ತಿತು. ಜೀವನದ ಸ್ವಾಮಿಯಾದ ಸರ್ವೇಶ್ವರನ ಅಸ್ತಿತ್ವವು ಅವರಿಗೆ ಮನವರಿಕೆಯಾಯಿತು. ಆ ದೇವಾಧಿದೇವನು ಇದ್ದದ್ದರಿಂದಲೇ ನಮ್ಮ ಅಸ್ತಿತ್ವವು ಇಲ್ಲಿ ಇದೆಯೆಂದು ತಿಳಿಯಿತು. ಆದರೆ ಬುದ್ಧಿಗೂ ಶ್ರದ್ಧೆಗೂ ನೂರಾರು ಸಾರೆ ಜಗಳವಾಗಿ ಕೊನೆಗೆ ಅಂತರಿಕ ವಾಣಿಯೊಂದು ಪ್ರಕಟವಾಗಿ ಅವರನ್ನು ಉದ್ಧರಿಸಿತು. "ಜೀವಿಸಿ ಇರುವುದು ಮತ್ತು ದೇವರನ್ನು ಅರಿಯುವುದು ಇವೆರಡೂ ಒಂದೇ!" (೧೩) ಆ ಮೇಲೆ ಟಾಲ್‌ಸ್ಟಾಯರ ಬಾಲ್ಯದ ಧಾರ್ಮಿಕ ಶ್ರದ್ಧೆಯು ನವನವವಾಗಿ ಪುನಃ ಅವರಿಗೆ ಲಭಿಸಲು, ಅವರು ತಮ್ಮ ಶಾಂತಿಗೆ ಆಧಾರ ಸ್ವರೂಪರಾದ ಸಾಧಾರಣ ಜನರಲ್ಲಿ ಸಮ್ಮಿಲಿತರಾಗಿ ಆ ಜನರ ಧಾರ್ಮಿಕ ಶ್ರದ್ಧೆಯಂತೆ ತಾವೂ ನಡೆದುಕೊಳ್ಳಲನುವಾದರು. (೧೪) ಆದರೆ ಆ ಸಾಮಾನ್ಯ ಜನರು ಮನ್ನಿಸುತ್ತಿದ್ದ ಮಠಮಾನ್ಯಗಳ ಹಾಗೂ ದೇವಸ್ಥಾನಗಳ ಎಷ್ಟೋ ಆಚಾರಗಳು ಅವರ ಸುಕುಮಾರ ಚಿತ್ತಕ್ಕೆ ಬಹಳ ಪೀಡೆಯನ್ನು ಕೊಡಹತ್ತಿದವು. ಸಾಮಾನ್ಯ ಜನರ ಮೇಲಿನ ಪ್ರೇಮಕ್ಕಾಗಿ ಅವೆಲ್ಲ ಬಾಧೆಗಳನ್ನು ತಾಳಿಕೊಳ್ಳಲಿಕ್ಕೆ ಬೇಕಾದಷ್ಟು ನಿಶ್ಚಯಿಸಿದರೂ ಪ್ರಯೋಜನ

ವಾಗದೆ ಹೋಗಹತ್ತಿತು. (೧೫) ಇಷ್ಟಕ್ಕೇ ಮುಗಿಯಲಿಲ್ಲ. ಆದರೆ ಒಂದೇ ಧರ್ಮದ ನಾಲ್ಕೆಂಟು ಪಂಗಡದವರು ತಮ್ಮ ತಮ್ಮೊಳಗೆ ಒಬ್ಬರನ್ನೊಬ್ಬರು ಪಾಖಂಡಿಗಳೆಂದು ನಿಂದಿಸಿ ತಮ್ಮ ತಮ್ಮ ಶ್ರೇಷ್ಠತೆಯನ್ನು ಪ್ರತಿಷ್ಠಾಪಿಸುತ್ತಿರುವುದನ್ನು ನೋಡಿ ಟಾಲ್‌ಸ್ಟಾಯರ ಅಂತಃಕರಣವು ಇನ್ನಿಷ್ಟು ಘಾಸಿಗೊಂಡದ್ದರಿಂದ ಕೊನೆಗೆ ತಾವು ಧರ್ಮವೆಂಬುದನ್ನು ಸಂಪೂರ್ಣವಾಗಿ ತ್ಯಜಿಸಿಯೇ ಬಿಟ್ಟರು. (೧೬) ಸಾಮಾನ್ಯ ಜನರ ಶ್ರದ್ಧೆಗೆ ಆಧಾರವಾಗಿರುವ ಪುರಾತನ ಧಾರ್ಮಿಕ ಕಥಾನಕಗಳಲ್ಲಿಯೇ ಮೂಲತಃ ಸತ್ಯಾಸತ್ಯಗಳೆರಡೂ ಸಮ್ಮಿಶ್ರವಾಗಿರಬೇಕೆಂದೆನಿಸಿ ಧಾರ್ಮಿಕ ಗ್ರಂಥಗಳನ್ನು ಕೂಲಂಕಷವಾಗಿ ಪರಿಶೀಲಿಸತೊಡಗಿದರು. ಅವುಗಳಲ್ಲಿ ದಿವ್ಯ ಸತ್ಯವು ಇದ್ದುದು ನಿಜವೆಂದೆನಿಸಿತಾದರೂ ಅಬದ್ಧವೂ ಕೂಡ ಅವುಗಳಲ್ಲಿ ಇದ್ದೇ ಇದೆಯೆಂದು ಅವರಿಗೆ ಕಂಡು ಬಂದಿತು. ಹೀಗೆ ಉಭಯ ಸಂಕಟದಲ್ಲಿ ಪೇಚಾಡುತ್ತಿರುವಾಗ ಅವರಿಗೊಂದು ದಿವ್ಯ ಸ್ವಪ್ನವುಂಟಾಗಿ ಅದರಲ್ಲಿ "ಕೆಳಗಿನ ಅಪಾರವಾದ ಕೂಪದಲ್ಲಿ ನಿನ್ನ ತಾರಣವಾಗಬೇಕಾದರೆ ಮೇಲಿನ ಈಶ್ವರನ ರಾಜ್ಯದ ಅಗಾಧದ ಕಡೆಗೆ ಲಕ್ಷ್ಯವನ್ನಿಡು" ಎಂದು ಆದೇಶವಾಯಿತು.

ಇದು ವರೆಗೆ ಪ್ರಸ್ತುತ ಗ್ರಂಥದ ಸಾರಾಂಶವನ್ನು ಹೇಳಿದ್ದಾಯಿತು. ಇನ್ನು ಅದರೊಳಗಿನ ವಿವಾದಾಸ್ಪದವಾದ ಕೆಲವು ಮಾತುಗಳ ಬಗ್ಗೆ ಇಲ್ಲಿ ಚರ್ಚಿಸುವೆವು.

ಅಂಥ ಮಾತುಗಳು ಯಾವವೆಂದರೆ— ಸಾಮಾನ್ಯ ಜನತೆ ಮತ್ತು ಜೀವನ ಶಕ್ತಿ ಇವುಗಳ ನಿಕಟ ಸಂಬಂಧವನ್ನು ಕಲ್ಪಿಸಿದ್ದು, ತರ್ಕ ಶುದ್ಧ ವಿಚಾರವಾದವನ್ನು ಬದಿಗೊತ್ತಿ ವಿಚಾರದ ಒರೆಗೆ ಹತ್ತಲಾರದ ಶ್ರದ್ಧೆಯನ್ನು ಪುರಸ್ಕರಿಸಿದ್ದು, ಇತ್ಯಾದಿ ಇತ್ಯಾದಿ .... .... ....

ಇದೀಗ ಜೀವನ ಶಕ್ತಿಯೆಂದರೆ ಏನೆಂಬುದನ್ನು ಕುರಿತು ಆಲೋಚಿಸುವಾ. ಪಶುಪಕ್ಷಿಗಳಿಗೆ ಬೌದ್ಧಿಕ ವಿಚಾರವಿಲ್ಲವೆಂಬುದು ಸ್ಪಷ್ಟವಷ್ಟೆ? ಹಾಗಾದರೆ ಅವು ಜೀವನವನ್ನು ಯಾವ ಶಕ್ತಿಯಿಂದ ಸಾಗಿಸುವವು?

ಈಗ ಪ್ರಾಣಿ ಶಾಸ್ತ್ರಜ್ಞರು, ಅವುಗಳಿಗೊಂದು ಬಗೆಯ ಅನಿಸಿಕೆಯ ಜಾತಿಯ ಜ್ಞಾನವಿರುತ್ತದೆಯೆಂದೂ, ಅವಕ್ಕೆ ಹುಟ್ಟುಗುಣ (**Instinct**) ವೆಂಬ ಹೆಸರನ್ನು ಕೊಡಬಹುದೆಂದೂ ಹೇಳುತ್ತಾರೆ. ಈ ಶಕ್ತಿಯ ಕಾರ್ಯಗಳು ಒಮ್ಮೊಮ್ಮೆ ಮಾನವನ ಬುದ್ಧಿ ಶಕ್ತಿಯನ್ನು ಹೀಯಾಳಿಸುವಷ್ಟು ಅಗಾಧವಾಗಿ ತೋರುತ್ತಿರುವದುಂಟು. ಗೀಜಗ ಹಕ್ಕಿಯ ಗೂಡು ಬುದ್ಧದೇವನಿಗೆ ಮರುಳು ಹಿಡಿಸಿತಂತೆ. ಇನ್ನೂ ಇಂಥ ಎಷ್ಟೋ ಸಂಗತಿಗಳು ಸಿಗಬಲ್ಲವು. ಅದಿರಲಿ ಈಗ ಮಾನವರೆಂಬ ಬುದ್ಧಶಾಲಿಗಳಾದ ನಾವು ದಿನ ಬಳಿಕೆಯ ಎಲ್ಲ ಚಿಕ್ಕಪುಟ್ಟ ಕಾರ್ಯಗಳನ್ನು ಬುದ್ಧಿಯಿಂದ ತಿಳಿದುಕೊಂಡೇ ಮಾಡುತ್ತಿರುವೆವೋ? ಗೋಣಿನ ನರಗಳನ್ನು ಸಡಿಲು ಮಾಡಿಕೊಳ್ಳುವಾಗ ಮೊದಲಿಗೆ ಮೈಯನ್ನು ಸಡಿಲು ಬಿಡಬೇಕಾಗುತ್ತದಷ್ಟೆ? ಹಾಗೆ ಮೈ ಸಡಿಲು ಬಿಡುವುದೆಂದರೆ ಆಗ ನಾವು ಏನು ಮಾಡುತ್ತೇವೆಂಬುದು ನಮ್ಮ ಬುದ್ಧಿಗೆ ತುಂಬಾ ತಿಳಿದಿದೆಯೇ? ಈಗ ಶರೀರ ಶಾಸ್ತ್ರಜ್ಞರು ಅದಕ್ಕೆ ಏನೇನೋ ಹೇಳಬಹುದು. ಆದರೆ ಅಷ್ಟು ತಿಳಿದುಕೊಳ್ಳಲಿಕ್ಕೆ ಎಷ್ಟು ಕಾಲಾವಧಿ ಮತ್ತು ಪರಿಶ್ರಮ ಬೇಕಾಯಿತು? ಗೊತ್ತಿಲ್ಲವೆ? ಮೈಗೆ ಹುಳಗಳು ಕಚ್ಚಿದರೆ ಅಲ್ಲಿ ಕೈಯನ್ನಾಡಿಸಿಕೊಳ್ಳುತ್ತೇವೆ. ದನಗಳೂ ಕೂಡ ಇದನ್ನು ಮಾಡುತ್ತವೆ. ಆದರೆ ಅಲ್ಲಿ ಆಗ ಏನಾಗಿರುತ್ತದೆ? ಮತ್ತು ನಾವು ಕೈಯಾಡಿಸುವದರಿಂದ ತಿರುಗಿ ಏನು ಸರಿ ಪಡುತ್ತದೆ? ಇದನ್ನು ನಮ್ಮ ಬುದ್ಧಿಯಿಂದ ಅರಿತು ಮಾಡಿದೆವೋ? ದುಃಖ ಬಂದಾಗ ಬಾಯಿತೆರೆದು ಅಳುತ್ತೇವೆ. ಆದರೆ ಹಾಗೆ ಮಾಡುವದರಿಂದ ಯಾಕೆ ಹಗುರಾಗುತ್ತದೆಯೆಂಬುವನ್ನು ನಾವು ಬಲ್ಲೆವೋ? ಬುದ್ಧಿಯೆಂಬುವರ ಗಂಧವೂ ಕೂಡ ಇಲ್ಲದ ಎಳೆಗೂಸು-ಗಳೂ ಕೂಡ ಹೀಗೆ ಮಾಡುತ್ತಿರುತ್ತವೆಯಲ್ಲವೆ? ಕರುಗಳು ಹುಟ್ಟಿದ ಕೆಲ ನಿಮಿಷಗಳೊಳಗಾಗಿಯೇ ತಮ್ಮ ತಾಯಿಯ ಮೈತುಂಬ ಹುಡುಕಾಡಿ ಮೊಲೆಗಳನ್ನು ಗುರುತಿಸುತ್ತವೆ. ಇದು ಯಾವ ಶಕ್ತಿಯಿಂದ? "ಅಗತ್ಯ" ವೆಂಬುದು ಪ್ರಾಣಿಮಾತ್ರಕ್ಕೆಲ್ಲಾ ಆ ಅಗತ್ಯವನ್ನು ಪೂರೈಸಿಕೊಳ್ಳುವ "ಉಪಾಯ" ವನ್ನು ಕಲಿಸಿಕೊಡುತ್ತದೆಯೆಂದು ಸಿದ್ಧವಾಗುತ್ತದಷ್ಟೆ? ಈ ಅಗತ್ಯವೆಂಬುದು ನಮ್ಮ ಅಜ್ಞಾತ ಗುರುವೆಂದೂ,

ಆವರಿಂದ ಅವಿದಿತವಾಗಿ ನಮಗೆ ಸೂಚಿತವಾಗುವ ಉಪಾಯಗಳ ನಿಜವಾದ ಸಂಶೋಧನದ ಶ್ರೇಯಸ್ಸು ಸ್ವತಃ ನಮ್ಮ ಬುದ್ಧಿಯದಲ್ಲವೆಂತಲೂ ಸಿದ್ಧವಾಗುವದಿಲ್ಲವೆ? ನಮ್ಮ ಜೀವನದ ಬಹು ಭಾಗವು ಹೀಗೆ ನಮ್ಮ ಬುದ್ಧಿಗೆ ಅಗೋಚರವಾಗಿಯೇ ಸಾಗುತ್ತಿರುತ್ತದೆ. ಅರ್ಥಾತ್ ಅವೆಲ್ಲ ಕೃತಿಗಳ ರಚನೆಯನ್ನು ಸಂಪೂರ್ಣವಾಗಿ ಅರಿತುಕೊಂಡೇ ನಾವು ಮಾಡುತ್ತಿರುವೆವೆಂತಲ್ಲ. ನಮ್ಮೊಳಗಿನ ಈ ಅಗೋಚರವಾದ ಶಕ್ತಿಗೇ ತೀರ ಇತ್ತೀಚಿಗಿನ ಸಂಶೋಧಕರು "ಜೀವನಶಕ್ತಿ" ( **Life Force** ) ಎಂದು ಹೆಸರನ್ನಿಟ್ಟಿದ್ದಾರೆ. ಯಾವ ಸ್ಥಿತಿಯಲ್ಲಿ ಪ್ರಾಣಿಕೋಟಿಗೆ ಬುದ್ಧಿ ಶಕ್ತಿಯ ಅಗತ್ಯವುಂಟಾಯಿತೋ ಆಗ ಜೀವನ ಶಕ್ತಿಯೇ ಅವನ್ನು ಅರಳಿಸಿಕೊಂಡಿತೆಂದು ಹೇಳಬಹುದು. ಪ್ರೊಫೆಸರ್ ಬರ್ಗಸನ್ನರು ಹೀಗೆಯೇ ಅನ್ನುತ್ತಾರೆ. **" The Mental Capacity is evolved by the Life Force. "**

ಪಶುಗಳು, ಅನಂತರ ಶಿಶುಗಳು, ಆ ಮೇಲೆ ನಿರಕ್ಷರಿಗಳು ಇವರೆಲ್ಲರು ಜೀವನ ಶಕ್ತಿಯ ಬೆಂಬಲದಿಂದ ಜೀವಿಸುತ್ತಿರುವರು. ಶಿಕ್ಷಣ ಮುಂತಾದ ಬಾಹ್ಯ ಸಂಘರ್ಷಣವು ಹೆಚ್ಚಾಗಿ ಉಳ್ಳವರ ಬೌದ್ಧಿಕ ವಿಕಾಸವು ಹೆಚ್ಚಾಗಿರುವದರಿಂದ ಅವರಲ್ಲಿ ಬುದ್ಧಿಶಕ್ತಿ ಮತ್ತು ಜೀವನಶಕ್ತಿ ಇವೆರಡರ ಗಲಬಿಲಿಯುಂಟಾಗಿ ಒಂದು ಬಗೆಯ ಅಸ್ಪಷ್ಟತೆಯು ತೋರುತ್ತಿರುತ್ತದೆ. ಬಲವಾಗಿ ತಿರುಗುತ್ತಿರುವ ಚಕ್ರದ ಹಲ್ಲುಗಳನ್ನು ಎಣಿಸುವುದು ಎಷ್ಟು ದುಸ್ತರವೋ, ಇಂಥ ಮಿಶ್ರ ಸ್ಥಿತಿಯ ಜನರ ಜೀವನದ ಘಟಕಾವಯವಗಳನ್ನು ನಿಶ್ಚಿತವಾಗಿ ತಿಳಿದುಕೊಳ್ಳುವುದೂ ಅಷ್ಟೇ ಬಿಗಿಯಾಗಿರುತ್ತದೆ. ಹಿಂದೂ ಶಾಸ್ತ್ರಗಳ ಮೇರೆಗೆ ಇಂಥವರಿಗೆ "ರಾಜಸಿಕ" ವ್ಯಕ್ತಿಗಳೆಂದು ಹೆಸರು. ಕೇವಲ ಜೀವನಶಕ್ತಿಯೊಂದರ ಮೇಲೆಯೇ ಬಾಳುವವರಿಗೆ ಈ ಶಾಸ್ತ್ರದಂತೆ "ತಾಮಸಿಕ" ರೆಂದು ಅನ್ನಬೇಕಾಗುತ್ತದೆ. ಹಾಗಾದರೆ ರಾಜಸಿಕರಿಗಿಂತಲೂ ತಾಮಸಿಕರೇ ಶ್ರೇಷ್ಠರೋ? ಬೆಳವಣಿಗೆ ಹೊಂದಿದವರಿಗಿಂತ ಬೆಳವಣಿಗೆ ಹೊಂದಲಾರದವರೇ ಹೆಚ್ಚಿನವರೊ? ಈ ಪ್ರಶ್ನವು ಹೇಗಿದೆಯೆಂದರೆ – 'ತಾರುಣ್ಯಾವಸ್ಥೆಯಲ್ಲಿರುವವರಿಗಿಂತ

ಶಿಶು ಅವಸ್ಥೆಯಲ್ಲಿದ್ದವರೇ ಶ್ರೇಷ್ಠರೂ? ಎಂದು ಕೇಳಿದಂತೆ. ಇವೆರಡನ್ನು ಳಿದು ಮೂರನೆಯದೊಂದು ಅವಸ್ಥೆಯಿರುತ್ತಿರುತ್ತದೆ. ತೋರಿಕೆಯಲ್ಲಿ ತೀರ ಕೆಳಗಿನ ಅವಸ್ಥೆಗೂ, ಮೇಲಿನದಾದ ಈ ಮೂರನೆಯ ಅವಸ್ಥೆಗೂ ಬಹಳ ಸಾಮ್ಯವಿರುತ್ತದೆ. ಸಾತ್ವಿಕ ಸ್ಥಿತಿಯೂ, ತಾಮಸಿಕ ಸ್ಥಿತಿಯೂ ತೋರಿಕೆಯಲ್ಲಿ ಒಂದನ್ನೊಂದು ಬಹಳವಾಗಿ ಹೋಲುತ್ತವೆ. ಆದರೆ ಅವೆರಡರ ಪ್ರಭಾವದಲ್ಲಿ ಮಾತ್ರ ಮಹದಂತರವಿರುತ್ತದೆ. ಸಾಧು ಸಂತರು ಕೂಸುಗಳ ಸ್ವಭಾವವನ್ನು ಬಹಳ ಪುರಸ್ಕರಿಸುತ್ತಾರೆಂಬುದನ್ನು ಸರ್ವ ದೇಶಗಳ ಶಾಸ್ತ್ರಗಳಲ್ಲಿ ಕಾಣಬಹುದು.

ಯಾವ ಕಾಲದಲ್ಲಿ ಬರೇ ಕೆಳಗಿನ ಎರಡೇ ಬಗೆಯ ಜನರು ಹೆಚ್ಚಾಗಿದ್ದು ಮೇಲಿನ ಮೂರನೇ ತರಹದವರ ಸಂಖ್ಯೆಯು ಅಪರೂಪವಾಗುವದೋ, ಆಗ ತೀರ ಕೆಳಗಿನ ಜನರೇ ಹೆಚ್ಚು ಶುದ್ಧರಾಗಿ ಕಾಣುತ್ತಾರೆ. ಕಾರಭಾರದಲ್ಲಿ ಕೈಹಾಕಿರುವ ರಾಜಸಿಕರ ಜೀವನವು ಉಗ್ರವಾಗಿರುವದರಿಂದ ಅವರ ಬಗೆಗೆ ತಿರಸ್ಕಾರವುಂಟಾಗಿ, ತಮ್ಮ ಮಟ್ಟಿಗೆ ತಾವು ಶಾಂತವಾಗಿ ಬಾಳುತ್ತಿರುವ ಸಾಧಾರಣ ಜನರ ಬಗೆಗೆ ಸಹಾನುಭೂತಿಯು ಹುಟ್ಟುತ್ತಿರುವುದು ಸ್ವಾಭಾವಿಕವಾಗಿದೆ. ಸಾಮಾನ್ಯರೇ ಜಗತ್ತಿನಲ್ಲಿ ಶ್ರೇಷ್ಠರಾಗಿದ್ದುದಾದರೆ ಮಹರ್ಷಿ ಟಾಲ್‌ಸ್ಟಾಯರು ತಮ್ಮ ಬಾಲ್ಯಾವಸ್ಥೆಯಲ್ಲಿ ಅಂಥ ಸ್ಥಿತಿಯೊಳಗಿದ್ದಾಗಲೇ ಜಗದ್ವಂದ್ಯರಾಗಿರುತ್ತಿದ್ದರು. ಆದರೆ ವಸ್ತುಸ್ಥಿತಿಯು ಬೇರೆಯೇ ಇದೆ. ಅವರ ಬಾಲ್ಯದ ಶ್ರದ್ಧೆಯೆಲ್ಲ ಹಾರಿ ತಾರುಣ್ಯದ ಉಗ್ರವಾದ ಚೆಲ್ಲಾಟವೆಲ್ಲ ಯಥಾಪ್ರಕಾರ ಮುಗಿದು, ಬುದ್ಧಿಯು ವೈಭವದ ಪರಮೋಚ್ಚಸ್ಥಿತಿಗೆ ಮುಟ್ಟಿ, ಕೊನೆಗೆ ಸತ್ವಸ್ಥಿತಿಯಲ್ಲಿ ಶ್ರದ್ಧೆಯ ಪುನರ್ಜನ್ಮವಾದಾಗ ಅವರು ಮಹರ್ಷಿಗಳಾದರು. ಸಾಮಾನ್ಯರೂ ಶ್ರದ್ಧಾವಂತರು; ಅಸಾಮಾನ್ಯರೂ ಶ್ರದ್ಧಾವಂತರು. ಹೀಗೆಂದ ಮಟ್ಟಿಗೆ ಅವೆರಡೂ ಶ್ರದ್ಧೆಗಳು ಒಂದೇ ಆಗಿರಲಾರವು. ಪ್ರಾಥಮಿಕ ಶ್ರದ್ಧೆಯು ಪರಿಪಕ್ವ ಶ್ರದ್ಧೆಯ ಪ್ರಾಸಂಗಕ್ಕೂ ಕೂಡ ಬರಲಾರದು. ಆದರೂ ಅವೆರಡರಲ್ಲಿ ತೋರಿಕೆಯ ಸಾಮ್ಯವಾದರೂ ಇರುವದೆಂದೆನ್ನಬಹುದು. ಟಾಲ್‌ಸ್ಟಾಯರು ಮಾಡುವ ಸಾಮಾನ್ಯ ಜನತೆಯ

ಪ್ರಶಂಶೆಯು ಜಗತ್ತಿನ ಬುದ್ಧಿವಂತರಿಗೆ ಸನ್ನೆಮಾಡಿ ಹೇಳುವುದೇನೆಂದರೆ- "ಈಗ ನೀವು ಬಂದು ಮುಟ್ಟಿದ ಸ್ಥಿತಿಯೇ ಕೊನೆಯದಲ್ಲ. ನೀವು ಇನ್ನೂ ಮೇಲಕ್ಕೆ ಏರಬೇಕಾಗಿದೆ." ಇದು ಸರಿಯಾದ ಮಾತು. ತಮ್ಮ ಜೀವನದಿಂದಲೇ ಈ ಮಾತಿನ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿರುವರು. ಹೀಗೆಂತಲೇ ಇಂದು ಮಹಾತ್ಮಾ ಗಾಂಧಿಯವರೂ, ಮಹರ್ಷಿ ರೋಮೆನ್ ರೋಲ್ಯಾಂಡರೂ ಈ ಟಾಲ್‌ಸ್ಟಾಯರನ್ನು ಒಂದು ಬಗೆಯಿಂದ ಗುರು ಸ್ವರೂಪರೆಂದು ವಂದಿಸುತ್ತಾರೆ.

ಇನ್ನು ವಿಚಾರವಾದ ಮತ್ತು ಶ್ರದ್ಧೆ ಇವುಗಳ ತೊಡಕನ್ನು ಕುರಿತು ಆಲೋಚಿಸುವಾ.

ಈ ಮಾತು ಅರ್ಥಕ್ಕಿಂತ ಹೆಚ್ಚಾಗಿ ಮೇಲಿನ ಸಂದರ್ಭದಲ್ಲಿಯೇ ಮುಗಿದು ಹೋದಂತಾಗಿದೆ. ಈಗ ಜಗತ್ತಿನ ಸುಧಾರಣಾವಾದಿಗಳೆಲ್ಲರೂ ಪಾಶ್ಚಾತ್ಯ ದೇಶಗಳಲ್ಲಿ ಹಬ್ಬಿದ ರ್‍ಯಾಶನಾಲಿಜಮ್ ಅಥವಾ "ತರ್ಕಶುದ್ಧ ವಿಚಾರವಾದ" ವನ್ನು ಪುರಸ್ಕರಿಸುವವರಾಗಿದ್ದಾರಷ್ಟೆ? ಪ್ರಸ್ತುತಗ್ರಂಥದ ಅನುವಾದಕರಾದ ನಾವು ಸಹ ಇದೇ ವಿಚಾರದವರಾಗಿರುವೆವೆಂಬುದನ್ನು ನಮ್ಮ ನಾಡಿನ ಅಣ್ಣಂದಿರು ಬಲ್ಲರು. ಸ್ವತಃ ನಮಗೆ ಈ ಗ್ರಂಥವನ್ನು ಅನುವಾದಿಸುವಾಗ ಅನಿಸುತ್ತಿದ್ದದ್ದೇನೆಂದರೆ— "ಈ ಗ್ರಂಥದ ಒಂಬತ್ತನೇ ಪ್ರಕರಣದಲ್ಲಿ ಬರುವ ಶ್ರದ್ಧಾವಾದವು ವಿಚಾರವಾದವನ್ನು ಕೊಲ್ಲುತ್ತ ದಲ್ಲಾ! ವಿಚಾರವಾದವನ್ನು ಪುರಸ್ಕರಿಸುವವರಾದ ನಾವು ನಾಡಿಗೆ ಇಂಥ ಗ್ರಂಥವನ್ನು ಒದಗಿಸುತ್ತಿರುವೆವಲ್ಲಾ! ಈ ಮೊದಲು ನಮ್ಮಿಬ್ಬ ರಲ್ಲೊಬ್ಬರು ಬರೆದ 'ಪೂರ್ವರಂಗ' 'ಕಾಳರಾತ್ರಿ' ಗಳೂ ಕೂಡ ಒಂದು ಬಗೆಯಿಂದ ಶ್ರದ್ಧಾವಾದದ ಪುಸ್ತಕಗಳೇ ಆಗಿವೆ. ನಾವು ಅನ್ನು ತ್ತಿರುವುದು ವಿಚಾರವಾದ; ಆದರೆ ಪ್ರಚಾರ ಪಡಿಸುತ್ತಿರುವುದು ಶ್ರದ್ಧಾ ವಾದ. ಇದೇನು? ಪಂಡಿತ ತಾರಾನಾಥರಾಯರು ಆವೆರಡು ಪುಸ್ತಕ ಗಳ ಮೇಲೆ ಟೀಕೆ ಮಾಡಿದ್ದೂ ಕೂಡ ಇದೇ ಕಾರಣದಿಂದಲೆ ಅಲ್ಲವೇ? ಹಾಗಾದರೆ ಇನ್ನು ಮುಂದಿನ ಹಂಚಿಕೆಯೇನು?" ಎಂದು ನಾವು ಆಲೋಚನೆಗೊಳಗಾದೆವು.

ಇಲ್ಲಿ ಒಂದು ಮಾತೇನೆಂದರೆ ಶ್ರದ್ಧಾವಾದವು ಅಸತ್ಯವಾಗಿದೆ ಯೆಂತಲ್ಲ. ಆದರೆ ಮೂಢ ಶ್ರದ್ಧೆಯಲ್ಲಿ ನಾಡಿನ ಜನತೆಯು ಮುಳುಗಿ ಹೋಗಿರುವಾಗ ಅವರಲ್ಲಿ ವಿಚಾರ ಪ್ರಖರತೆಯನ್ನು ಹುಟ್ಟಿಸದೆ ನಿರ್ವಾಹ ವಿರುತ್ತಿರುವದಿಲ್ಲ. ಇಂಥ ಕಾಲದಲ್ಲಿ ಶ್ರದ್ಧಾವಾದವು ಸತ್ಯವಾಗಿದ್ದರೂ, ವಿಚಾರ ಪ್ರಚೋದನದ ಸಲುವಾಗಿ ಅದನ್ನು ಟೀಕಿಸಿ, ತರ್ಕಶುದ್ಧ ವಿಚಾರದ ಮಹತ್ವವನ್ನು ಬಣ್ಣಿಸಬೇಕಾಗುತ್ತದೆಯೆಂಬ ಮಾತು ನಿರ್ವಿವಾದವಾಗಿದೆ. ಈಗ ನಮ್ಮ ಇದಿರಿಗೆ ಎರಡು ಸಂಕಟಗಳಿವೆ. ಸಾಮಾನ್ಯ ಜನರ ಮೂಢ ಶ್ರದ್ಧೆಯನ್ನು ಅಗಳಾಡಿಸುವುದಕ್ಕೆಂದು ಶ್ರದ್ಧಾವಾದವನ್ನು ಹಾರಿಸಿ ಬಿಡುವ ವಿಚಾರವಾದವನ್ನು ಪ್ರತಿಪಾದಿಸಬೇಕೋ? ಅಥವಾ ತರುಣ ಸಾಧಕರಿಗೆ ಭರವಸವನ್ನು ಹುಟ್ಟಿಸುವದಕ್ಕೆಂದು ವಿಚಾರದ ಗಲಭೆಗೆ ಮೀರಿದ ಶ್ರದ್ಧಾವಾದದ ಸತ್ಯತೆಯನ್ನು ಪ್ರಮಾಣಿಸಿ ಕೊಡಬೇಕೋ? ಇಲ್ಲಿ ಬರುವ ಒಂದು ಬಿಗಿಯೇನೆಂದರೆ ನಾವು ಸ್ವತಃ ಯಾವ ವಿಚಾರದವರಿರುವೆವೋ ಅದನ್ನು ಮರೆಮಾಜಿ ಲೋಕ ಪ್ರಯೋಜನಕ್ಕೆಂದು ಸಮಯೋಚಿತವಾದ ಬೇರೊಂದು ವಿಚಾರವನ್ನು ಪ್ರತಿಪಾದಿಸಬೇಕಾದರೆ ನಮ್ಮ ಜೀವನವು ಒಂದು ಬಗೆಯ ಸ್ಥಿರತ್ವಕ್ಕೆ ಬಂದು ಮುಟ್ಟಿರಬೇಕಾಗುತ್ತದೆ. ಆದರೆ ನಾವಿನ್ನೂ ಅಂಥ ಸ್ಥಿತಿಗೆ ದೂರದಲ್ಲಿರುವವರಿಂದ ನಮ್ಮ ವಿಚಾರವನ್ನು ನಾವು ಪ್ರತಿಪಾದಿಸುವದೇ ನಮಗೆ ಸಹಜವಾದದ್ದು.

ಇದಲ್ಲದೆ ನಮ್ಮ ನಾಡಿಗೆ ಸಾಧಾರಣವಾಗಿ ಈಗಾಗಲೇ ಅಂಥದೊಂದು ಪುಸ್ತಕವು ಲಭಿಸಿದೆ. "ವಿಕಾಸವಾದ ಅಥವಾ ದೇವರು ಸತ್ತನೇ?" ಎಂಬ ಪುಸ್ತಕದ ಹೆಸರನ್ನು ಎಲ್ಲರೂ ಕೇಳಿರಬಹುದು. ಇದಲ್ಲದೆ ಪ್ರಸ್ತುತ ಗ್ರಂಥವಾದ "ಬಾಳಿನಲ್ಲಿ ಬೆಳಕು" ಎಂಬುದು ಕೇವಲ ಶ್ರದ್ಧಾವಾದದಿಂದ ಮೊದಲಾಗಿ, ಶ್ರದ್ಧಾವಾದದಲ್ಲಿಯೇ ಬೆಳೆದು, ಶ್ರದ್ಧಾವಾದದಲ್ಲಿಯೇ ಮುಗಿತಾಯ ಹೊಂದುವಂತಹದೇನೂ ಅಲ್ಲ. ಇದರಲ್ಲಿ ಪ್ರಖರವಾದ ವಿಚಾರ ತಾಂಡವವು ಬೇಕಾದಷ್ಟು ಇದ್ದೇ ಇದೆ. ಆದರೆ ವಿಚಾರವಾದಕ್ಕೇ ವಿಚಾರವು ನಿಂತುಬಿಟ್ಟಿಲ್ಲವೆಂಬುದಿಷ್ಟೇ ಇದರೊಳಗಿನ ವಿಶೇಷವು. ಅಲ್ಲದೆ ಈ ಗ್ರಂಥದಲ್ಲಿ ಟಾಲ್‌ಸ್ಟಾಯರು ವಿಚಾರವಾದವನ್ನು

ಸಂಪೂರ್ಣವಾಗಿ ಕೊಂದೇ ಬಿಟ್ಟಿಲ್ಲ. ಆದರೆ ಅದರ ಸೀಮೆಯನ್ನು ಮಾತ್ರ ನಿರ್ಧರಿಸಿದ್ದಾರೆ. ಅವರು ಒಮ್ಮೆ ಹೀಗೆ ಅನ್ನುತ್ತಾರೆ— " ನನ್ನ ವಿಚಾರವೇ ಅಸಂಗತವಾಗಿದ್ದಿತೋ? ಛೇ ಹಾಗೆಂದಿಗೂ ಇಲ್ಲ. ಜೀವನದ ಉದ್ದೇಶವೇನೆಂಬ ಪ್ರಶ್ನೆಗೆ ಉತ್ತರ ಕೊಡುವಾಗ ನಾನು ಮಾಡಿದ ತಪ್ಪು ಯಾವದೆಂದರೆ ಮರಣಶೀಲವಾದ ಜೀವನದ ಬಗೆಗೆ ಹೇಳಬಹುದಾದ 'ನಿರರ್ಥಕ' ವೆಂಬ ಉತ್ತರವನ್ನು ನಾನು ಅಸಾವಧಾನದಿಂದ ಅಮರವಾದ ಜೀವನಕ್ಕೆ ಸಹ ಸಮನ್ವಯಿಸಿದೆನು." ಇಲ್ಲಿ ಅವರು ಅನ್ನುವದೇನೆಂದರೆ ಜೀವನವು ಮರಣಶೀಲ ಮತ್ತು ಅಮರ ಹೀಗೆ ಎರಡು ವಿಧವಾಗಿದೆಯೆಂಬುದರ ಪರಿವೆಯು ನನಗಿಲ್ಲದ್ದರಿಂದ ಹಾಗೆ ಒಂದರ ಬಗ್ಗೆ ಹೇಳಬಹುದಾದ ಮಾತನ್ನು ತಪ್ಪಿ ಇನ್ನೊಂದರ ಬಗ್ಗೆಯೂ ಹೇಳಿದೆನು. ನನ್ನ ತರ್ಕಶುದ್ಧ ವಿಚಾರಕ್ಕೆ ಹೊಳೆದ ಉತ್ತರವು ಒಂದು ಬಗೆಯಿಂದ ಸತ್ಯವೇ ಆಗಿದ್ದಿತು.

ಇದರ ಮೇಲಿಂದ ಹೊರಡುವ ಮಥಿತಾರ್ಥವೇನೆಂದರೆ ತಾರ್ಕಿಕ ವಿಚಾರವು ಜಗತ್ತಿನ ಮರಣಶೀಲ ವಸ್ತುಗಳಿಗೆ ತುಂಬಾ ಸರಿಹೋಗುತ್ತದೆ. ಆದರೆ ಅಮರ ವಸ್ತುಗಳನ್ನು ಅದರಿಂದ ಅಳೆಯಹೋದರೆ ವಿಪರೀತವಾಗುತ್ತದೆ. ಪ್ರಸ್ತುತ ಗ್ರಂಥದ ಕೊನೆಯ ಪ್ರಕರಣದಲ್ಲಿ ಅವರು ತರ್ಕಶುದ್ಧ ವಿಚಾರವಾದವು ಅಬದ್ಧವಾಗಿಲ್ಲವೆಂದು ಬಹಳ ತವಕದಿಂದ ಹೇಳಲು ಮುಂದುವರಿದಿದ್ದಾರೆ. ಅದು ಹೇಗೆಂದರೆ— " ನಾನು ಎಲ್ಲ ವಿಷಯಗಳನ್ನು ತಿಳಿದುಕೊಳ್ಳಬೇಕೆಂದು ಹವಣಿಸುವದಿಲ್ಲ. ಯಾಕೆಂದರೆ ಹಾಗೆ ಮಾಡುವುದು ಬಹಳ ಅಸಾಧ್ಯವಾದ ಮಾತಾಗಿದೆ. ನಾನು ಬಯಸುವುದು ಇಷ್ಟೇ: ಅದೇನೆಂದರೆ, ಯಾವುದನ್ನು ತಿಳಿದುಕೊಳ್ಳುವುದೇ ಅಶಕ್ಯವೋ, ಅದು ಅಂಥ ತಿಳಿಯಲಸಾಧ್ಯವಾದ ವಿಷಯವೆಂಬುದು ಮಾತ್ರ ನನಗೆ ತಿಳಿದರೆ ಸಾಕೆನ್ನುತ್ತೇನೆ. ಆದರೆ ನನ್ನ ತರ್ಕದ ಬೇಡಿಕೆಗಳು ಅಸಂಬದ್ಧವಾಗಿವೆಯೆಂಬ ಕಾರಣದಿಂದಲ್ಲ.— ಅವು ಸರಿಯಾಗಿಯೇ ಇವೆ. ಅವುಗಳನ್ನು ಬಿಟ್ಟುಕೊಟ್ಟರೆ ನನಗೆ ಏನೂ ತಿಳಿಯುವುದೆಂಬುದೇ ಶಕ್ಯವಿಲ್ಲ. ಆದರೆ ನನ್ನ ಬುದ್ಧಿಶಕ್ತಿಯ ಮೇರೆಯನ್ನು ನಾನು ಬಲ್ಲೆನಾದ್ದರಿಂದ ಹೀಗೆ ಅನ್ನುತ್ತೇನೆ."

ಅಂದಮೇಲೆ ಟಾಲ್‌ಸ್ಟಾಯರು ವಿಚಾರವಾದವನ್ನು ಕೊಂದಿರುವ ರೆಂದಂತಾಯಿತೋ, ಅಥವಾ ಅದನ್ನು ಅವರ ರಾಜ್ಯದಲ್ಲಿ ಬದುಕಿಸಿ ಇಡ ಲಿಕ್ಕೆ ಪ್ರಯತ್ನಿಸಿರುವರೆಂದಂತಾಯಿತೋ? ವಾಚಕರೇ ವಿಚಾರ ಮಾಡಲಿ.

ಇದರಿಂದ ಧ್ವನಿತವಾಗುವ ಒಂದು ವಿಶೇಷ ವಿಷಯವಾವುದೆಂದರೆ, ಜಗತ್ತಿನ ಅಗಾಧ ಅಮರ ಅನಂತ ವಸ್ತುಗಳನ್ನು ಗ್ರಹಿಸುವುದಕ್ಕೆ ಸೀಮಾ ಬದ್ಧವಾದ ಸಾಂತವಿಷಯಗಳ ಸಂಸರ್ಗದಿಂದ ಪುಷ್ಟವಾದ ತಾರ್ಕಿಕ ಬುದ್ಧಿಯು ಸಮರ್ಥವಿಲ್ಲ.

ಆದರೆ ಅಂಥ ವಸ್ತುಗಳನ್ನು ಅರಿತುಕೊಂಡೇ ಬಿಟ್ಟೇನೆಂದು ಈಗ ಜಗತ್ತು ಆಗ್ರಹವನ್ನು ತೊಟ್ಟು ನಿಂತಿದೆಯೆಂದ ಬಳಿಕ 'ಅಗತ್ಯ' ಕ್ಕೆ ತಕ್ಕ 'ಉಪಾಯ' ವನ್ನು ಏರ್ಪಡಿಸುವ 'ಜೀವನ ಶಕ್ತಿ' ಯು ಬುದ್ಧಿ ಗಿಂತ ಭಿನ್ನವಾದ ಇನ್ನೊಂದು ಯಾವುದಾದರೂ ಶಕ್ತಿಯನ್ನು ಅರಳಿಸಿ ಕೊಳ್ಳಲೇ ಬೇಕಲ್ಲವೆ? ಯೋಗೀಶ್ವರ ಅರವಿಂದರೂ ಕೂಡ ಹೀಗೇ ಅನ್ನುತ್ತಲಿದ್ದಾರೆ. **" But the evolution does not finish with the mind, it awaits a release something greater, a consciousness which is spiritual and supramental. "**

ಈ ಗ್ರಂಥದ ಮೇಲ್ಮೆಗೆ ಕಾರಣವಾದ ಇನ್ನೊಂದು ಅತ್ಯಂತ ಮಹ ತ್ವದ ಮಾತಾವುದೆಂದರೆ ಮಹರ್ಷಿ ಟಾಲ್‌ಸ್ಟಾಯರು ತಾವು ದೇವರಿ ದ್ದಾನೋ ಇಲ್ಲವೋ ಎಂಬ ಪ್ರಶ್ನವನ್ನು ನಿವಾರಿಸಿಕೊಳ್ಳುವುದಕ್ಕಾಗಿ ಇಷ್ಟೆಲ್ಲ ಕಷ್ಟವನ್ನು ಅನುಭವಿಸಲಿಲ್ಲ. ಆದರೆ ಜೀವನದ ಉದ್ದೇಶವೇ ನೆಂಬುದರ ಸಮಾಧಾನಕರವಾದ ಉತ್ತರವನ್ನು ಹುಡುಕಿಕೊಳ್ಳುವುದು ಅವರ ಮನೀಷೆಯಾಗಿದ್ದಿತು. ಜೀವನವನ್ನು ತಿಳಿದುಕೊಳ್ಳುವ ಮಾರ್ಗದಲ್ಲಿ ಅವರಿಗೆ ದೇವನ ಅಗತ್ಯವುಂಟಾಯಿತು. ಆದ್ದರಿಂದ ಆತನನ್ನು ಅರಿ ಯಲು ಪ್ರಯತ್ನಿಸಿದರು. ಕೊನೆಗೆ ಅರಿತರು. ಏಕಕಾಲಕ್ಕೆ ದೇವನ ಪ್ರಶ್ನವೂ ಬಾಳುವೆಯ ಪ್ರಶ್ನವೂ ಕೂಡಿಯೇ ಬಿಚ್ಚಿದವು. ಬಾಳುವೆಗೆ

ಮಹತ್ವವನ್ನು ಕೊಟ್ಟು ಅದಕ್ಕಾಗಿ ದೇವನನ್ನು ಆಹ್ವಾನಿಸಿದರು. ಆತನೂ ಅವರಿಗೆ ಅಂತರ್ವಾಣಿಯ ಮುಖದಿಂದ ಅದನ್ನೇ ಸ್ಪಷ್ಟಪಡಿಸಿದನು. ಇದರ ವಿವರವನ್ನೆಲ್ಲ ಇದೇ ಗ್ರಂಥದ ಹನ್ನೆರಡನೇ ಪ್ರಕರಣದಲ್ಲಿ ನೋಡಬಹುದು. ದೇವನಿಗಾಗಿ ಹಂಬಲಿಸಿ ಬಾಳುವೆಯ ಆಹುತಿ ಕೊಡುವುದಕ್ಕೆ ರೂಢಿಯಾಗಿಬಿಟ್ಟಿರುವ ಪುರಾತನ ಮಾರ್ಗದ ನವಸಾಧಕರು ಟಾಲ್‌ಸ್ಟಾಯರಿಂದ ಹೊಸ ಮಾತನ್ನು ಕಲಿಯಬೇಕಾಗಿದೆ. ಬಾಳುವೆಯ ಸಾರ್ಥಕತೆಯನ್ನು ಅರಿತುಕೊಳ್ಳುವುದೇ ಅವರ ಮಹಾ ಘೋರ ತಪಸ್ಸಿನ ಉದ್ದೇಶವಾಗಿದೆಯೆಂಬುದರ ನೆನಪು ನಮಗೆ ಹೆಜ್ಜೆಹೆಜ್ಜೆಗೆ ಉಳಿಯಬೇಕು. **“I need only be aware of God to live.”** “ನಾನು ಬಾಳಿ ಬದುಕುವುದಕ್ಕೆ ದೇವನನ್ನು ಸ್ಮರಿಸುವುದು ನನಗೆ ಅಗತ್ಯವಾಗಿದೆ.”

ಮಹರ್ಷಿ ಟಾಲ್‌ಸ್ಟಾಯರಿಗಾದ ಅಂತರ್ವಾಣಿಯ ಆದೇಶವಿದು— “ಇವನೇ ಆ ದೇವನು. ಆತನನ್ನುಳಿದು ಯಾರೂ ಬಾಳಲೇ ಆರರು. ದೇವನನ್ನು ಅರಿಯುವುದೂ ಬಾಳಿ ಬದುಕುವುದೂ ಎರಡೂ ಒಂದೇ ಆಗಿವೆ. ದೇವನೇ ಜೀವನವಾಗಿದ್ದಾನೆ.”

## “GOD IS LIFE.”

ಓಂ ಶ್ರೀ ಓಂ



# ಈ ' ಟಾಲ್‌ಸ್ಟಾಯ್ ' ಯಾರು ?

—:0:—

ಸಂಘದ ಕೋಟೆಯೇ ಇರಲಿ, ಸಂಸ್ಕೃತಿಯ ಕೊತ್ತಳವೇ ಇರಲಿ, ಧರ್ಮಮಂದಿರ— ರಾಜ್ಯದುಪ್ಪರಿಗೆ ಏನೇ ಇರಲಿ, ಅವು ಮುರುಕಳಿಗಿಳಿಯುವುದೂ, ಧ್ವಂಸವಕ್ಕೇರುವುದೂ ನಿಸರ್ಗ ಧರ್ಮವೇ ಆಗಿದೆಯಷ್ಟೇ? ಆಗ ಜೀರ್ಣೋದ್ಧಾರ ಇಲ್ಲವೆ ಪುನರ್ನಿರ್ಮಾಣ ಇವೆರಡೇ ಉಪಾಯಗಳು. ಜೀರ್ಣೋದ್ಧಾರವನ್ನೆಸಗಲಿಕ್ಕೆ ಸಾಮಾನ್ಯ ಶಿಲ್ಪಿಗಳು ನೈಮೋರಿ ಮುಂದೆ ಬಂದರೂ ಕೆಲಸವಾಗದಿರುವಾಗ ಒಬ್ಬ ಸುರಶಿಲ್ಪಿಯು ಉದಿಸಿ, ಪುನರ್ನಿರ್ಮಾಣ ಕಾರ್ಯವನ್ನು ಲೀಲಾ ಜಾಲವಾಗಿ ಕೊನೆಗಾಣಿಸುವನು. ಹೊಳೆಗೆ ಉಗಮದಿಂದ ನೀರು ಬಂದರೇ ಎಲ್ಲರಿಗೂ ಯಾವಾಗಲೂ ಸಮೃದ್ಧಿ. ಒಡ್ಡು ಒಡೆದು, ಹಳ್ಳಕೂಡಿ ಹೊಳೆಯೇರಿದರೆ ಆ ನೀರು ವ್ಯರ್ಥವು.

ರಶಿಯದ ರಾಷ್ಟ್ರಪುರುಷನ ಸಂದು ಸಂದುಗಳೂ ಕೊಂಕಿ, ದಿಕ್ಕುಗಾಣದೆ ಮಣ್ಣು ಮುಕ್ಕುತ್ತಿರುವಾಗ— ಯುರೋಪಿನ ಆಕಾಶದಲ್ಲಿ ಯುದ್ಧ-ಸೈನ್ಯಗಳ ಗುಡುಗು, ನವಸುಧಾರಣೆಯ ಧೂಮಕೇತು, ಅರಾಜಕತೆಯ ಬಾಲಚುಕ್ಕಿ ಇವೆಲ್ಲಾ ಒಮ್ಮೆಲೆ ಮೂಡಿನಿಂತು ಹೆದರಿಸುತ್ತಿದ್ದವು. ಬಡತನವು ಬಾಯ್ತೆರೆದು ' ನೆಲವನ್ನೆಲ್ಲಾ ತುತ್ತುವೆನೆಂ'ದು ನಾಲಿಗೆ ಚಾಚಿತ್ತು. ಕಾಲಪುರುಷನು ಗೋಗೋಲ್, ಮೊದಲಾದ ಚಿಕಿತ್ಸಕ ಸೇವಕರನ್ನು ನೊಣೆದು ಹಾಕಿದ್ದನು. ಆ ಹೊತ್ತಿಗೆ ಟಾಲ್‌ಸ್ಟಾಯಿಯ ಜನ್ಮ.

ಹುಟ್ಟಿದ್ದು ಸರದಾರ ಮನೆತನ, ಕೊನೆಯ ಕಾಯಕವು ಒಕ್ಕಲಿತನ. ಹೆಗಲಮೇಲೆ ಕೋವಿ ಹೊತ್ತ ಶೂರಸೈನಿಕನಾದರೂ, ಯುದ್ಧವನ್ನು ಪ್ರತಿರೋಧಿಸುವ ವಿರೋಧಕ. ಧರ್ಮಶಾಸ್ತ್ರವನ್ನನುಸರಿಸಿಯೂ ಧರ್ಮಗೇಡಿಯಾದ ಧಾರ್ಮಿಕ. ಸಾಹಿತ್ಯ ಸಾಮ್ರಾಟನಾದರೂ 'ಕಲೆಯು

ಕೇವಲ ಕಲೆಗಾಗಿ' ಎಂಬುವನ್ನು ಅಳಿಸಿ, 'ಕಲೆಯು ಜೀವನವನ್ನು ಮಧುರವನ್ನಾಗಿಯೂ, ಮನೋಹರವನ್ನಾಗಿಯೂ ಮಾಡುವದಕ್ಕಾಗಿ' ಎಂದು ತಿಳಿಸಿದ ಸಾಹಿತ್ಯ-ಕ್ರಾಂತಿಕಾರಕ. ಕೊಲೆ, ಕುಡಿತ, ಹೊರಬುದ್ಧಿಗಳ ಆಗರವಾದ ಆತನು ಅಹಿಂಸಾವಾದಿ, ನೀತಿವಂತ, ಬಳಸಿದ ಬ್ರಹ್ಮಚಾರಿ. ಸುಖಲೋಲುಪನಾಗಿದ್ದರೂ ರಸಋಷಿ. ಸಾಮ್ರಾಜ್ಯ ಶಾಹಿ ರಶಿಯದ ಇತಿಹಾಸಾಕಾಶದಲ್ಲಿ ಈತನ ಮನೆತನವು ಧ್ರುವನಕ್ಷತ್ರವಾಗಿದ್ದಂತೆ, ಸೋವಿಯಟ್ ರಶಿಯದ ಉಷಃಕಾಲದಲ್ಲಿ ಬೆಳ್ಳಿಚಿಕ್ಕೆಯಾಗಿದೆ. ನವಸುಧಾರಣೆಯನ್ನು ನಿರ್ದಯವಾಗಿ ಒರೆಗಲ್ಲಿಗೆ ತಿಕ್ಕಿ, ಸ್ಪಷ್ಟವಾಗಿ ಖಂಡಿಸುವ ಸಮರ್ಥ ವಿಮರ್ಶಕ.

ಟಾಲ್‌ಸ್ಟಾಯಿಯ ಹುಟ್ಟು ೧೮೨೮ರಲ್ಲಿ. ಈತನು ಒಂದುವರೆ ವರುಷದವನಿದ್ದಾಗ ತಾಯಿ, ಒಂಭತ್ತು ವಯಸ್ಸಿಗೆ ತಂದೆ ಇಬ್ಬರೂ ಬಿಟ್ಟು ತೆರಳಿದರು. ಟಾಲ್‌ಸ್ಟಾಯಿಗೂ ಆತನ ನಾಲ್ಕೈದು ಬಂಧುಗಳಿಗೂ 'ಟಟಿಯಾನಾ' ಎಂಬ ಮಹಿಳೆಯು ಪಾಲಕಳಾದಳು. ಆಕೆ ಬಹಳ ಒಳ್ಳೆಯವಳು. ಅಂತೇ ಆಕೆಯ ಪ್ರಭಾವವು ತನ್ನ ಮೇಲೆ ಚೆನ್ನಾಗಿ ಬಿತ್ತೆಂದು ಆತ ಹೇಳಿದ್ದಾನೆ— "ಬಾಲ್ಯದಲ್ಲಿಯೇ ಕಕ್ಕಿಯು ನನಗೆ ಪ್ರೇಮಾನಂದವನ್ನು ಅನುಭವಿಸುವಂತೆ ಮಾಡಿದ್ದಳು. ಬರೇ ಮಾತಿನಿಂದಷ್ಟೇ ಅಲ್ಲ, ಪ್ರತಿಯೊಂದು ಕೃತಿಯಿಂದಲೂ ನನ್ನ ಒಲುಮೆಯನ್ನು ಬಣ್ಣಗೊಳಿಸಿದಳು.... ಇದೊಂದು ಪಾಠವಲ್ಲದೆ,— ಶಾಂತ ಹಾಗು ಏಕಾಂತ ಜೀವನದ ಸೌಂದರ್ಯವನ್ನು ತೋರಿಸಿಕೊಟ್ಟಳು."

ಚಿಕ್ಕಂದಿನಿಂದಲೂ ದಿನಚರಿ ಬರೆದಿಡುವುದು ಆತನ ಸ್ವಭಾವ. ಅದರಿಂದ ಅವನು ಎಂಥ ಹುಡುಗನೆಂಬುವುದು ಸ್ಪಷ್ಟವಾಗುತ್ತದೆ. ತನ್ನ ಸ್ವತಃದ ನಡೆವಳಿಕೆಗಾಗಿ ಹಾಕಿಕೊಂಡ ನಿಯಮಾವಳಿಯಲ್ಲಿ ಒಂದೆರಡನ್ನು ಹೇಳಿದರೆ ಸಾಕು. (೧) ಎಷ್ಟು ಸಂಕಟ ಬಂದರೂ ಹಿಡಿದ ಕೆಲಸವನ್ನು ಕೊನೆಗಾಣಿಸುವುದು. (೨) ಶಕ್ಯವಿದ್ದಷ್ಟು ಅದನ್ನು ಉತ್ತಮವಾಗಿ ಮಾಡುವುದು. (೩) ಪುಸ್ತಕದಲ್ಲಿ ಓದಿದ ಒಂದಾನೊಂದು ಮಾತು ಮರೆತರೆ, ಪುಸ್ತಕವನ್ನು ನೋಡದೆ ಅದನ್ನು ನೆನಪಿಗೆ ತಂದುಕೊಳ್ಳುವುದು.

ಮೊದಲು ರಾಜದೂತನಾಗುವ ಇಚ್ಛೆಯಿಂದ ಪೌರ್ವಾತ್ಯ ಭಾಷೆಗಳನ್ನೋದುವ ವಿಚಾರ ಬಂತು. ಆದರೆ ಅದು ನಿಲ್ಲದೆ ಹೋಯ್ತು. ಆಗ ಕಾನೂನಿನ ಅಭ್ಯಾಸಕ್ಕೆಳಸಿದನು. ಅದೂ ಹುಸಿಗಲ್ಲು. ಕೊನೆಗೆ ವಿಶ್ವವಿದ್ಯಾಲಯಕ್ಕೆ ಶರಣು ಹೊಡೆದು ಹುಟ್ಟಿದೂರಿಗೆ ಹೊರಟನು.

ಹುಟ್ಟಿದೂರಾದ 'ಯಾಸಯಾನಾ' ದಲ್ಲಿ ಮಾಡಬೇಕೆಂದು ಇಟ್ಟುಕೊಂಡ ಕೆಲಸಗಳೆಂದರೆ— ಫ್ರೆಂಚ್, ಜರ್ಮನ್, ಇಂಗ್ಲಿಷ್, ರಶಿಯನ್, ಇಟಾಲಿಯನ್, ಲ್ಯಾಟಿನ್ ಭಾಷೆಗಳನ್ನು ಕಲಿಯುವುದು; ಒಕ್ಕಲತನದ ಅಭ್ಯಾಸವನ್ನು ಸೋಪಪತ್ತಿಕವಾಗಿ ಮಾಡಿ ಅನುಭವಪಡೆಯುವುದು. ಆದರೆ ಆತನಾದದ್ದು ಭೋಗವಿಲಾಸಿ. ಸಲ್ಲದ ನಡೆಯಿಂದ ಹೊಲ್ಲದ ಬಾಳಿಗೆಡೆಯಾದನು. 'ಪಶುವಿನಂತೆ ಜೀವನವನ್ನು ಕಳೆಯುತ್ತಿದ್ದೇನೆಂ'ದು ತನ್ನ ದಿನಚರಿಯಲ್ಲಿ ತಾನೇ ಬರಕೊಂಡಿದ್ದಾನೆ. ಈ ಬಗ್ಗೆ ತನ್ನ 'ಆತ್ಮಚರಿತ್ರೆ' ಯಲ್ಲಿ (**My Confession**) ಬರೆದುದು ಹೇಗೆಂದರೆ— "ಆ ಕಾಲದ ನನ್ನ ಜೀವನವನ್ನು ನೆನೆಸಿಕೊಂಡರೆ ತುಂಬಾ ಸಂಕಟವೂ ನಾಚಿಕೆಯೂ ಉಂಟಾಗುತ್ತವೆ. ಅದೆಷ್ಟೋ ಜನರನ್ನು ಕೊಂದೆ. ಜೂಜನಾಡಿದೆ. ಬೆವರುಸುರಿಸಿ ಗಳಿಸಿದ ಒಕ್ಕಲಿಗರ ಗಳಿಕೆಯನ್ನು ಅಲ್ಲದ ಕೆಲಸದಲ್ಲ ಕಳೆದೆ. ಊಳಿಗ ಹೆಂಗುಸರೊಡನೆ ಸಂಬಂಧವಿಟ್ಟೆ. ನಂಬಿದವರ ಕುತ್ತಿಗೆ ಕೊಯ್ದೆ. ಸುಳ್ಳು, ಸುಲಿಗೆ, ಕುಡಿತ, ಕಟುಕತನ, ಕೊಲೆ ಮುಂತಾದವುಗಳನ್ನೆಷ್ಟೋ ಮಾಡಿದೆ. .... ಆದರೂ ನಾನೊಬ್ಬ ದೊಡ್ಡ ಮನುಷ್ಯನೆಂದೇ ಎಣಿಸಲ್ಪಡುತ್ತಿದ್ದೆ. ಈ ರೀತಿಯಾಗಿ ನನ್ನ ಬಾಳು ಹತ್ತು ವರುಷ ಕಳೆಯಿತು."

ತಾರುಣ್ಯದ ಭರದಲ್ಲಿ ಮೇರೆ ಮೀರಿ ಕೆಲವು ಹೆಂಗಸರೊಡನೆ ದುರಾಚಾರ ನಡೆಸಿದ್ದನ್ನೂ, ತಾನು ಕೀಳುಜಾತಿಯ ಒಬ್ಬ ಗುಲಾಮರ ಹುಡುಗೆಯನ್ನು ಪ್ರೀತಿಸಿ ಆಕೆಯಲ್ಲಿ ಒಂದು ಮಗುವನ್ನು ಪಡೆದಿದ್ದನ್ನೂ ಆತನ ದಿನಚರಿ (ಡಾಯರಿ) ಯು ಹೇಳುತ್ತದೆ.

ಇಷ್ಟರಲ್ಲಿ ಈತನು ರಶಿಯದ 'ತೋಪುಖಾನೆ'ಯೊಡನೆ ಕಾಕೇಶ ಸಕ್ಕೆ ಹೋಗಿ, ಮೂರು ವರುಷ ಅಲ್ಲಿದ್ದು (೧೮೫೧) ಬಿಡುಗಾಲದಲ್ಲಿ ಮರುಳಿದನು. ಕಾಕೇಶಸದ ಪ್ರಶಾಂತ ಹಾಗು ಮನೋರಂಜಕ ಜೀವನ ದಿಂದ ಶರೀರ-ಮನಸ್ಸುಗಳು ಮಿಗಿಲಾದ ಆರೋಗ್ಯವನ್ನು ಗಳಿಸಿದವು; ವಿಚಾರಶಕ್ತಿಯೂ ವಿಕಸಿತವಾಯ್ತು. ಅದೇ ಕಾಲಕ್ಕೆ ಆತನ ಮೊದ ಲನೇ ಕಾದಂಬರಿಯಾದ 'ಬಾಲ್ಯ' (**Childhood**) ವು ಬರೆದು ಪ್ರಕಟ ವಾದದ್ದು. ಈ ಕಾದಂಬರಿಯನ್ನು ವಿಮರ್ಶಕರೆಲ್ಲರೂ ಮುಕ್ತಕಂಠದಿಂದ ಹೊಗಳಿದರು. ಕಾಕೇಶಸ್ ಜೀವನವು 'ಬಾಲ್ಯ'ವನ್ನು ಬರೆಯಿಸಿದಂತೆ ಬೇರೆ ಎರಡು ಗ್ರಂಥಗಳ ಮೂಲಬಂಡವಲವನ್ನೂ ಆವನಲ್ಲುಂಟು ಮಾಡಿತು.

ಮುಂದೆರಡು ವರ್ಷಗಳಲ್ಲಿ ಕಾಕೇಶಸ್ ಬಿಟ್ಟು 'ಸಬಸ್ತಾಪೂಲ'ಕ್ಕೆ ಬರಬೇಕಾಯ್ತು. ಅಲ್ಲಿ ಸೈನಿಕ ಕಚೇರಿಯೊಳಗೆ ಒಂದು ಸ್ಥಳವು ಈತನಿಗೆ, ಮುಖ್ಯಾಧಿಕಾರಿಯಾದ ಈತನ ಸಂಬಂಧಿಕನೊಬ್ಬನಿಂದ ಸಿಕ್ಕಿತು. ಮರುವರುಷವೇ 'ಸಬಸ್ತಾಪೂಲದ ಕತೆಗಳ' (**Tales from Sebastapool**) ಎಂಬ ಪುಸ್ತಕವು ಪ್ರಕಾಶಿತವಾಗಿ, ರಶಿಯದ ರಾಜನ ಕಣ್ಣುಗಳನ್ನು ಕುಕ್ಕಿಸಿ ಅವನೆದೆಯನ್ನು ಸೆರೆಹಿಡಿಯಿತು. ಈ ಸ್ಥಳವು ಆತನಿಗೆ ಕೀರ್ತಿಯನ್ನು ಗಳಿಸಿಕೊಟ್ಟಿತಲ್ಲದೆ, ಅನೇಕ್ಕೋ ಅನನುಭೂತ ಅನುಭವಗಳು ಆತನ ಬಗೆವಿಡಿದವು. ಎಲ್ಲಕ್ಕೂ ಮೊದಲು ಮನುಷ್ಯನ ವೀರತೆಯನ್ನೂ, ದುಃಖಾಂತ ಜೀವನದ ದೃಶ್ಯವನ್ನೂ ಕಂಡಿದ್ದು ಇಲ್ಲಿಯೇ. ಇಪ್ಪತ್ತೆರಡು ಸಾವಿರ ಜನರು ತಾವಾಗಿಯೇ ಕೋವಿ ತುಬಾಕಿಗಳಿಗೆ ಎದೆಗೊಟ್ಟು ಆಹುತಿಯಾದರು. ಅಷ್ಟೇ ಜನರು ಆಸ್ಪತ್ರೆಯಲ್ಲಿ— 'ಆಪರೇಶನ್ ಟೇಬಲ್' ಮೇಲೆ ಕ್ಲೋರೋಫಾರ್ಮ್ ಮೂಸದೆ ಸಹನೆಯಿಂದಷ್ಟೇ ಅಲ್ಲ— ಸ್ವಸಂತೋಷದಿಂದ ಕಷ್ಟಗಳನ್ನು ತಾಳಿಕೊಳ್ಳುತ್ತಿದಾರಲ್ಲಾ! ಅದೇಕೆ? ಯಾವ ವೈಯ್ಯಕ್ತಿಕ ಲಾಭ ಕ್ಕಾಗಿಯೂ ಅಲ್ಲ; ಒಂದು ಆದರ್ಶಕ್ಕಾಗಿ— ಆ ದೇಶಭಕ್ತಿಯೆಂಬ ಆದರ್ಶಕ್ಕಾಗಿ!

ಸೈನಿಕ ವೈಭವದ ಬಗ್ಗೆ ತಿರಸ್ಕಾರ ಹುಟ್ಟಿದ್ದು ಇಲ್ಲಿಯೇ. ಹೇಸಿ ಕೊಂಡ ಜೀವವು 'ಪಿಟರ್ಸ್‌ಬರ್ಗ್'ಕ್ಕೆ ಬಂತು. ಅಲ್ಲಿ ಸುಪ್ರಸಿದ್ಧ ರಾದ ಗ್ರಂಥಕಾರರನೇಕರು, ಉದಿತೋದಿತ ಸಾಹಿತಿಯಾದ ಈತನನ್ನು ಒಳ್ಳೇ ಸನ್ಮಾನಪೂರ್ವಕವಾಗಿ ಸ್ವಾಗತಿಸಿದರು. ಕವಿಗಳೂ ಕಲಾವಿದರೂ ಮಿತ್ರರಾದರು. ಆದರೆ ಅವರ ಸಂಬಂಧವು ಈತನಿಗೆ ಸರಿಬೀಳದಿರಲು ಕೂಡಲೆ ಅವರ ಬಳಕೆಯನ್ನು ತಪ್ಪಿಸಿಬಿಟ್ಟನು.

ಯುರೋಪವನ್ನು ಸುತ್ತುವರೆದು ಬರಬೇಕೆಂದು ೧೮೫೭ ರಲ್ಲಿ ಹೊರಟು ಮೊದಲು 'ಪ್ಯಾರಿಸ್'ಕ್ಕೆ ಬಂದನು. ಅಲ್ಲಿ ಒಬ್ಬನನ್ನು ಗಲ್ಲಿಗೇರಿ ಸುವುದನ್ನು ಕಣ್ಣಾರೆ ಕಂಡನು. ಈ ಹೃದಯವಿದಾರಕ ದೃಶ್ಯದಿಂದ ಟಾಲ್‌ಸ್ಟಾಯಿಯ ಕೋಮಲಾಂತಃಕರಣಕ್ಕೆ ಬರೆಸೆಳೆದಂತಾಯ್ತು. ಅಂದಿ ನಿಂದ ಆತನು ಪ್ರಾಣ ದಂಡನ ಶಿಕ್ಷೆಗೆ ಕಟ್ಟುವಿರೋಧಿಯಾಗಿಬಿಟ್ಟನು.

ಪ್ಯಾರಿಸ್‌ದಿಂದ ಸ್ವಿಟ್ಸರ್‌ಲಂಡ್, ಜಿನೇವಾ, ಲೂಕ್ರೇನ್, ಮುಂತಾದ ಕಡೆ ಸಂಚರಿಸಿ ಮರಳಿಬಂದ ಮೇಲೆ ತನ್ನ ಎಷ್ಟೋ ಅನುಭವಗಳನ್ನು ಹೆಣೆದು 'ಎಲ್‌ಬರ್ಟ್' ಎಂಬ ಪುಸ್ತಕವನ್ನು ಪ್ರಕಟಿಸಿದನು.

ಪ್ರಾಥಮಿಕ ಶಿಕ್ಷಣದ ಸಮಸ್ಯೆಯನ್ನು ಕುರಿತು ಫ್ರಾನ್ಸ, ಜರ್ಮನಿ, ಇಂಗ್ಲಂಡಗಳಲ್ಲಿ ಅಧ್ಯಯನ ಮಾಡಿದ್ದರಿಂದ ಟಾಲ್‌ಸ್ಟಾಯನು (೧೮೬೧) ಒಕ್ಕಲಿಗರ ಮಕ್ಕಳಿಗಾಗಿ ಕೂಡಲೇ ಒಂದು ಶಾಲೆಯನ್ನು ತೆರೆದನು. ಆ ತನ್ನ ಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ತುಂಬಾ ಸ್ವಾತಂತ್ರ್ಯವನ್ನಿತ್ತಿದ್ದ ರಿಂದ ಅದು ಅಧಿಕಾರಿಗಳ ಕಣ್ಣುಗಳನ್ನು ಪಕ್ರಿಸಿತು. ಅಂತೇ ಮತ್ತೆ ಕೂಡಲೆ ಶಾಲೆಯನ್ನು ಮುಚ್ಚಬೇಕಾಯ್ತು.

ಭೂಮಿಯನ್ನು ಹಂಚಿಕೊಳ್ಳುವುದರ ಬಗ್ಗೆ ಸರದಾರ ಮತ್ತು ಒಕ್ಕಲಿಗರ ನಡುವೆ ಕಲಹವೇಳಲು, ದುಡಿಮೆಗಾರರ ಕೈವಾರಿಯಾದ ಈತನ ನೆರವು ಒಕ್ಕಲಿಗರಿಗೆ ಸಿಕ್ಕಿತು. ಅದರಿಂದ ಸರದಾರ ವರ್ಗವು ಉರಿದೆದ್ದಿತು. ಆದರೆ ಮಹರ್ಷಿಯು ನೇಗಿಲಯೋಗಿಗಳ ಕೈಬಿಡುವನೇ?

ಮೂವತ್ತುನಾಲ್ಕನೇ ವಯಸ್ಸು (೧೮೬೨) ಟಾಲ್‌ಸ್ಟಾಯಿಯ ಮದುವೆಯಾಯ್ತು. 'ಸೋಫಿಯಾ ಬೇಹರ್ಸ್'ಳೊಡನೆ. ಬಳಿಕ ಕೆಲವುಕಾಲ ಸುಖಸಂತೋಷಗಳಲ್ಲಿ ಕಳೆಯಿತು. ಕಾಕೇಶಸ್ ಜೀವನದಿಂದ ಸಾಹಿತ್ಯ ಹಿಮನದಿಯು ಉಗಮಿಸಿದಂತೆ ಈ ವಿವಾಹವು ರಸ ಜೀವನವನ್ನಿತ್ತು ಸಾಹಿತ್ಯ ಗಂಗೆಯನ್ನಾಗಿಸಿ ಅದಕ್ಕೆ ವಿಶಾಲತೆಯನ್ನೂ, ಗಂಭೀರತೆಯನ್ನೂ ತಂದುಕೊಟ್ಟಿತು. ಲಗ್ನವಾದ ಒಂದೆರಡು ವರುಷಗಳಲ್ಲಿಯೆ 'ಯುದ್ಧ ಹಾಗು ಶಾಂತಿ' (**War and Peace**) ಎಂಬ ಕಾದಂಬರಿಯನ್ನು ಬರೆದನು. ಆ ಮೇಲೆ ಒಂದು ಪಟ್ಟು ಕಳೆಯಲು 'ಅನಾಕರೇನೀನಾ' (**Anna Karenina**) ಎಂಬ ಮತ್ತೊಂದು ಕಾದಂಬರಿ. ಇವೆರಡು ಕಾದಂಬರಿಗಳ ರಚನಾ ಕೌಶಲ್ಯವನ್ನು ಸಮಸ್ತ ಯುರೋಪ ಖಂಡವೆಲ್ಲಾ ಹೊಗಳಿತು. 'ಶೇಕ್ಸ್‌ಪೀಅರ್' ಕವಿಗೆ ಮಹಾಕೀರ್ತಿಯನ್ನು ತಂದಿತ್ತ ಗ್ರಂಥಗಳೂ ಲಗ್ನವಾದ ಮೇಲೆ ಬರೆದವುಗಳೇ ಎಂತೆ. ಈ ಕಾಲವು ಟಾಲ್‌ಸ್ಟಾಯಿಗೆ ಪುನರ್ಜನ್ಮದಂತೆ. ಅಂತೆಯೇ ಆತನು—"ನಾನು ಈಗ ಹೊಸದಾಗಿ ಜನ್ಮವೆತ್ತುತ್ತಿದ್ದೇನೆ" ಎಂದು ತನ್ನ ದಿನಚರಿಯಲ್ಲಿ ಬರೆದಿದ್ದಾನೆ.

ಸತಿ, ಸಂಸಾರ, ಸಾಹಿತ್ಯ ಎನ್ನುತ್ತ ಐವತ್ತು ವಯಸ್ಸಿನ ಎಲ್ಲೆಗೆ ಬರಲು ಒಮ್ಮೆಲೇ ಆತನ ಕಣ್ಣು ತೆರೆದವು. ಸರ್ವ ಪ್ರಪಂಚವೂ ನಿಸ್ಸಾರವೆಂದು ತೋರಿತು. ತುಂಬಾ ಪ್ರೀತಿಸುವ ಹೆಂಡತಿ. ಆದರೇನು ಮನಸ್ಸಿಗೆ ಹಿಗ್ಗಿಲ್ಲ. ಹೃದಯಕ್ಕೆ ಶಾಂತಿಯಿಲ್ಲ. ಸುತ್ತೆತ್ತಲೂ ಕಾಳರಾತ್ರಿ. ಹಾದಿ ಸಿಗದು. ಹೇಳುವವರಾರು? ಬಗೆಯ ತಿರುಗಣಿಯಲ್ಲಿ ಬಿದ್ದ ವಿಚಾರ ಪ್ರವಾಹವೆಲ್ಲಾ ಉರುಳಿ ಹೊರಳಿ ಸುತ್ತಿ ಸುಳಿಯಾಗೇಳುತ್ತಿದೆ. ಸುಖದ ಮೂಲಸ್ಥಾನವನ್ನು ಕೇಳುತ್ತಿರುವ ಜೀವವು ಸುಖದ ನೆರಳನ್ನು ನಂಬೀತೇ? ನೆರಳನ್ನು ಅಡಗಿಸಿ ಬಿಡಬೇಕೆಂದು ನೆರಳಿನ ಮೂಲವನ್ನೇ ಹೊಡೆದು ಹಾಕುವುದಕ್ಕೆ ಯತ್ನಿಸಿದಂತೆ ಆತ್ಮಹತ್ಯೆಯ ವಿಚಾರವು ಆತನನ್ನು ಕರ್ತವ್ಯ ತತ್ಪರನನ್ನಾಗಲಿಕ್ಕೆ ಒಮ್ಮೆ ಸೂಚಿಸಿತು. ನೇಣುಹಾಕಿಕೊಂಡೇನೆಂದು ಹಗ್ಗಗಳನ್ನು ಬಿಸುಟಿದನು.

ಗುಂಡಿನಿಂದ ಹೊಡೆದುಕೊಂಡೇನೆಂಬ ಭಯದಿಂದ ಬೇಟೆಗೆ ಹೋಗುವು ದನ್ನು ಕೂಡ ನಿಲ್ಲಿಸಿದನು. ಈ ಸಮಯದ ಆತ್ಮಕಥೆಯು ಇದೇ ಪುಸ್ತಕದ ಬೇರೊಂದು ಕಡೆಗೆ ಕಾಣಸಿಗುವದು.

ಧರ್ಮ ಶಾಸ್ತ್ರಾದಿಗಳ ಅಭ್ಯಾಸದಿಂದ ನಿರ್ಧರಿಸಿದ್ದೇನಂದರೆ— " ಕ್ರಿಸ್ತದೇವನ ಬೆಟ್ಟದ ಮೇಲಿನ ಧರ್ಮೋಪದೇಶ " ( **Sermon on the Mount** ) ದಂತೆ ಜೀವನವನ್ನು ನಡೆಯಿಸಬೇಕು. ಜೀವನಕ್ಕೆ ಪರಿ ಶ್ರಮವೂ ಪ್ರೇಮವೂ ಅತ್ಯಂತಾವಶ್ಯಕ. ನಾವು ನಮ್ಮ ಸ್ವಭಾವವನ್ನು ಸಾದಾ ಸರಳವಾಗಿಡೋಣ. ನಾವು ದುಡಿಯುವವರೂ ದಯಾಳುಗಳೂ ಆಗಬೇಕು. ಹೆರರು ನಮಗೆ ತೋರಿಸುವ ಮಮತೆಗಿಂತ ಹೆಚ್ಚುಮಮತೆ ಯನ್ನು ನಾವು ಅವರಿಗೆ ತೋರಿಸಬೇಕು. ಸಮಾಜದಿಂದ ನಾವು ಪಡೆ ಯುವ ಲಾಭಕ್ಕಿಂತ ಹೆಚ್ಚಾಗಿ ನಾವದಕ್ಕೆ ಒದಗಿಸತಕ್ಕದ್ದು. ಸೇವೆ ಯಲ್ಲಿ ಆನಂದ ಪಡುತ್ತಿರಬೇಕು. ನಾವು ಹರ್ಷಚಿತ್ತರಾಗಿದ್ದು ಮರ ಣಕ್ಕೂ ಹೆದರಕೂಡದು. ಅದಕ್ಕಾಗಿ ನಾವು ಅಹಂಕಾರವನ್ನು ಹೊಡೆದು ಹಾಕಬೇಕು. ಅಂದಮೇಲೆ ಎಲ್ಲಿಯ ಮರಣ ಭಯ?

ಅಂದಿನಿಂದ ಟಾಲ್‌ಸ್ಟಾಯಿಯು ಆತ್ಮವಿಮರ್ಶೆಯಲ್ಲಿ ತೊಡಗಿ ನಡತೆಯನ್ನು ತಿದ್ದಿಕೊಳ್ಳುತ್ತಲೂ, ಧಾರ್ಮಿಕ ವಿಷಯಗಳನ್ನು ಕುರಿತು ಬೋಧಿಸುತ್ತಲೂ ಇರತೊಡಗಿದನು. ಊಟಕ್ಕೆ ಅತ್ಯಂತ ಸಾಧಾರಣ ವಾದ ಆಹಾರ. ಒಕ್ಕಲಿಗರಂತೆ ಕಗ್ಗವಾದ ಅರಿವೆ-ಅಂಚಡಿ. ಸೊಂಟ ಕ್ಕೊಂದು ಕಟ್ಟಿದ ಕಸಬರಿಗೆ. ದುಡಿತ ದಾವತಿಗಳನ್ನು ಮಾಡಲನು ವಾದನು. ಬಿಸಿಲಲ್ಲಿ ಹೊಲಗೆಲಸಕ್ಕೆ ಸೈಬಾಗಿಸಿದನು. ಕಟ್ಟಿಗೆ ಹೊರೆ ಹೊತ್ತನು. ಬೂಟು ಹೊಲಿದನು. ದುಡಿಮೆಯಿಂದಲೂ, ಸೆರೆ ಮುಂತಾದ ತ್ಯಾಗದಿಂದಲೂ ಆತನ ಆರೋಗ್ಯವು ವರ್ಧಿಸಿತು.

ತನ್ನ ಧನಸಂಪತ್ತನ್ನೆಲ್ಲಾ ಜನಸಾಮಾನ್ಯರಲ್ಲಿ ಹಂಚಿಬಿಡಬೇಕೆಂಬ ಯೋಚನೆಗೆ ತೊಡಗಿದಾಗ ಆತನ ಸತಿಯು ಅದಕ್ಕೆ ಸಮ್ಮತಿಸದೆ ವಿರೋಧಿ ಸಿದಳು. " ಮಕ್ಕಳು ಮರಿಗಳನ್ನು ಹೇಗೆ ಹೊರೆಯಲಿ " ಎನ್ನುವುದೇ

ಆಕೆಯ ಪ್ರತಿವಿಚಾರ. "ತಾನು ಬರೆದ ಪುಸ್ತಕಗಳ ಅಧಿಕಾರವನ್ನೆಲ್ಲಾ ಬಿಟ್ಟುಕೊಡಬೇಕು; ಹೊಟ್ಟೆಗಾಗಿ ಕೈಕಾಲುಗಳ ದುಡಿತವೇ ನ್ಯಾಯ ಸಮ್ಮತವಾಗಿರಲು ತಲೆಯ ಶ್ರಮಕ್ಕೆ ಪ್ರತಿಫಲವೇಕೆ? ಅದು ಆತ್ಮೋನ್ನತಿಯ ಹಾದಿ" ಎಂದು ಈತನ ಮತ. "ಬೇಡ! ಹಾಗಾಗಕೂಡದು!" ಎನ್ನುವವಳು ಹೆಂಡತಿ. ಈ ವಿಚಾರ ಪ್ರಭೇದದಿಂದಲೇ ಇವರ ಸಂಸಾರ ದಲ್ಲಿ ಒಂದಿಷ್ಟು ಅಸುಖವು ತಲೆಯೆತ್ತಿದ್ದು ಕೊನೆಗೂ ಅದು ತನ್ನ ತಲೆ ಮರೆಸಿಡಲಿಲ್ಲ. ಇರಲಿ.

ರಶಿಯದ ಅರಸನಾದ ಝಾರನ ನಿರಂಕುಶ ಪ್ರಭುತ್ವಕ್ಕೆ ಹಣ್ಣುಗಾಯಿಯಾದ ಜನತೆಯು ಭೀಕರ ಬರಗಾಲದ ತುಳಿತಕ್ಕೆ ಸಿಕ್ಕುಕೊಂಡಿತು. (೧೮೮೨) ಟಾಲ್‌ಸ್ಟಾಯಿಯು ಸ್ವಯಂಸೇವಕನಾಗಿ ಸಾಮಾನ್ಯ ಜನರೊಡನಿದ್ದಾಗ ಕಂಡುಂಡ ಸಂಗತಿಗಳೆ "ಏನು ಮಾಡಬೇಕು?" **(What to do?)** ಎಂಬ ಗ್ರಂಥ ಲೇಖನಕ್ಕೆ ಕಾರಣವಾದವು.

ಮನಕ್ಕೆ ಸೊಗಸಿಲ್ಲ, ಮನೆಯಲ್ಲಿ ಸುಖವಿಲ್ಲ. ರಾಜ್ಯದಲ್ಲಿ ಶಾಂತಿಯಿಲ್ಲ, ನಾಗರಿಕತೆಯಲ್ಲಿ ನ್ಯಾಯವಿಲ್ಲ. ಎಂದು ನಗರದ ಕೃತ್ರಿಮ ಜೀವನವನ್ನು ಹೀಗಳಿದು ಹಳ್ಳಿಯ ಹಾದಿ ಹಿಡಿದನು. ಅಲ್ಲಿ ಸಾಮಾನ್ಯ ಜನತೆಗಾಗಿ ಹೊತ್ತಿಗೆಗಳನ್ನು ರಚಿಸತೊಡಗಿದನು. ಜನಸಾಮಾನ್ಯಕ್ಕೆ ಈ ಸಾಹಿತ್ಯವು ಜೇನಿನಂತೆ ರುಚಿಸಿತು. ಒಂದು ಸಲಕ್ಕೆ ಪ್ರತಿಯೊಂದು ಪುಸ್ತಕದ ಇಪ್ಪತ್ತುನಾಲ್ಕು ಸಾವಿರ ಪ್ರತಿಗಳನ್ನು ಮುದ್ರಿಸುವುದು; ಬಹಳಷ್ಟು ಪುಸ್ತಕಗಳನ್ನು ಒಂದು ವರುಷದಲ್ಲಿ ಅಯ್ದಯ್ದು ಸಲ ಅಚ್ಚು ಹಾಕಿಸಬೇಕಾಗುತ್ತಿತ್ತು. ನಾಲ್ಕು ವರುಷಗಳೊಳಗಾಗಿ ಟಾಲ್‌ಸ್ಟಾಯಿಯ ಪುಸ್ತಕಗಳ ಒಂದೂಕಾಲು ಕೋಟಿಯಷ್ಟು ಪ್ರತಿಗಳು ಮಾರಿದವಂತೆ!

'ಧಾರ್ಮಿಕರೆಂಬುವ ಧರ್ಮಗೇಡಿಗಳ' ಡಂಭಾಚಾರವನ್ನು ತೆಗಳಿ, ಸತ್ಯ ಧರ್ಮವನ್ನು ಕಂಡು ಉಂಡು ಉಸುರಿದರೆ, ಧರ್ಮಮಂದಿರದ ಉಪ ದೇಶಕರಿಂದ ಬಂತೇ ಇವರ ಪಾಲಿಗೆ ಬಹಿಷ್ಕಾರ! ಮಹಾ ಪುರುಷರನ್ನು ಎದುರಿಸುವ ಎಡರುಗಳಿಂದ ಅವರ ಬೆಳಕೇ ಇಮ್ಮಡಿಸುತ್ತದೆಂಬ ಮಾತು

ನಂಬಬೇಕಾದದ್ದು. ಮತ ಸಂಸ್ಥೆಗಳು ಟಾಲ್‌ಸ್ಟಾಯಿಯನ್ನು ಬಹಿಷ್ಕರಿಸಿದರೂ ಅವನ ಮೇಲೆ ಜನತೆಯ ಶ್ರದ್ಧೆಯು ದ್ವಿಗುಣಿತವೇ ಆಯ್ತು. ಜನರು ಸೂಕ್ಷ್ಮವಾಗಿ ಆತನ ಉಪದೇಶವನ್ನು ಪರೀಕ್ಷಿಸಿ ಮನ್ನಿಸತೊಡಗಿದರು. ಆತನನ್ನು ಪೂಜ್ಯನಾದ ಧರ್ಮೋಪದೇಶಕನೆಂದು ಸ್ತುತಿಸಿದರು. ರಶಿಯದ ಮಟ್ಟಿಗಿದ್ದ ಆತನ ಪ್ರಭಾವ ಕಿರಣಗಳು, ಆವರಿಸಿದ ಬಹಿಷ್ಕಾರದ ಕತ್ತಲೆಯನ್ನು ಸೀಳಿ ಸುತ್ತಲಿನ ದೇಶಗಳಲ್ಲಿಯೂ ಪಸರಿಸಿ ಪ್ರಕಾಶಿಸ ತೊಡಗಿದವು.

ಎಲ್ಲಾ ಸಾಕು. ಹಳ್ಳಿಯೇ ನನ್ನ ಅಂತ್ಯ ಜೀವನಕ್ಕೆ ಸಮಾಧಾನವನ್ನೀಯಲೆನ್ನುವ ಈ ವೀರ ಮುನಿಯನ್ನು ಕೆರಳಿಸುವ ಮತ್ತೊಂದು ಪ್ರಸಂಗವು ಮುಂದೆ ಬಂದು ನಿಂತಿತು. ರಾಜ್ಯಕ್ರಾಂತಿಯ ಸಮಯಕ್ಕೆ ರಶಿಯದ ಸರ್ಕಾರವು ಕ್ರೂರೋಪಾಯಗಳನ್ನು ಯೋಜಿಸುತ್ತಿರಲು ಮಲಗಿದ ಈ ಹುಲಿಯು ಎದ್ದು ಕುಳಿತದ್ದೇ—ಲೆಕ್ಕಣಿಯ ಅಸ್ತ್ರ ಹಿಡಿದು—"ನಾನಿನ್ನು ಸುಮ್ಮನಿರಲು ಶಕ್ಯವಿಲ್ಲ" ಎಂಬ ಗದ್ದರಣೆಯನ್ನು ಲೇಖನ ರೂಪದಿಂದ ಗುಡುಗಿಟ್ಟಿತು. ಅದರಿಂದ ಸರ್ಕಾರವೂ ಮುನಿಯಿತು.

ಸರಕಾರದ ಮುನಿಸು, ನಾಗರಿಕತೆಯ ಅನ್ಯಾಯ, ಧಾರ್ಮಿಕರ ಡಂಭಾಚಾರ, ಹೆಂಡತಿಯ ಪ್ರತಿರೋಧ ಇವೆಲ್ಲವುಗಳೊಡನೆಯೂ ಕಾದುತ್ತ ಆ ಮಹರ್ಷಿಯು ತನ್ನ ಧ್ಯೇಯ ಮಾರ್ಗದಲ್ಲಿ ಸಾಗಬೇಕಿತ್ತು, ಆ ಧ್ಯೇಯ ಜೀವನವೇ ಅವನಿಗೆಲ್ಲಾ ಕಾಲ್ತೊಡಕಾಗಿ ನಿಂತವೆನ್ನಿ. ಸರದಾರನಾಗಿದ್ದಾಗ ಸರಕಾರವು ಆತನನ್ನು ಮನ್ನಿಸಲಿಲ್ಲವೇ? ಸರಸ ಸಾಹಿತ್ಯದ ಸಾಮ್ರಾಟನೆಂದು ನಾಗರಿಕರೂ ಧರ್ಮೋಪದೇಶಕರೂ ಹೊಗಳಿದ್ದಿಲ್ಲವೇ? ಸಂಸಾರಾಸಕ್ತನಾಗಿದ್ದಾಗ ಆತನ ಹೆಂಡತಿ ಲೇಖನ ಕಾರ್ಯದಲ್ಲಿ ಸರ್ವ ಸಹಾಯವನ್ನೀಯಲಿಲ್ಲವೇ? ಟಾಲ್‌ಸ್ಟಾಯಿಯು ಮಕ್ಕಳೊಡನೆ ಕಾಗದದ ಮೇಲೆ ದೆವ್ವಗಳ ಚಿತ್ರ ಬರೆಕೊಟ್ಟು ಮಕ್ಕಳಂತೆ ನಕ್ಕು ಆಡುತ್ತಿರಲಿಲ್ಲವೇ? ಜೀವನದ ಶಾಶ್ವತ ಸ್ಥಾನವಾದ ಧ್ಯೇಯದಿಂದ ಸರಕಾರದ ಸಿಟ್ಟಿನ ಕೆಂಡವು ಹೂವಿನ ಚೆಂಡು ಅನಿಸಿತು.

ಧರ್ಮೋಪದೇಶಕರ ಬಹಿಷ್ಕಾರವು ದೈವೀ ಪುರಸ್ಕಾರವೆನಿಸಿತು. ಹೆಂಡತಿಯ ಪ್ರತಿರೋಧವು ಆತ್ಮಸಾಧನಕ್ಕೆ ಕಾರಣವಾಯಿತೆಂಬಂತೆ ೧೯೧೦ ರಲ್ಲಿ ಮನೆಬಿಟ್ಟು ಹೊರಬಿದ್ದನು. ಗಂಡನ ಗೃಹತ್ಯಾಗದ ಸುದ್ದಿ ಕೇಳಿ ಹೆಂಡತಿ ಕೊಳದಲ್ಲಿ ಹಾರಿ ಪ್ರಾಣಬಿಡಬೇಕೆಂದಳು. ಜನರು ನೋಡಿ ಕಡೆಗೆಳೆದರು. ಸುತ್ತಿಗೆಯಿಂದ ಎದೆ ಬಡಿದುಕೊಂಡಳು. ಕತ್ತರಿ, ಚಾಕುಗಳಿಂದ ಚುಚ್ಚಿಕೊಂಡಳು, ಕಡೆಗೂ ಉಳಿದುಕೊಂಡಳು. ಇತ್ತ ಧವಳಗಿರಿಯಂತೊಪ್ಪುವ ಋಷೀಶ್ವರನು ಒಂದಾನೊಂದು ರೇಲ್ವೇ ನಿಲ್ದಾಣವನ್ನು ಸೇರುತ್ತಲೆ ಕಾಯಿಲೆ ಬಿದ್ದುಬಿಟ್ಟನು. ಈ ಸುದ್ದಿಕೇಳಿ ಹೆಂಡತಿ ಧಾವಿಸಿ ಬಂದಳು. ಲೆಕ್ಕವಿಲ್ಲದಷ್ಟು ನೆರೆದ ಸುದ್ದಿಗಾರರಿಂದಲೂ, ಛಾಯಾಚಿತ್ರಕಾರರಿಂದಲೂ ಸಮ್ಮರ್ದವಾದ ಆ ಗುಡಿಸಲಿನ ಹಳ್ಳಿಯು ಇಂದು ಮಹಾ ನಗರವೆಂಬಂತಾಗಿರಲು ಮಹರ್ಷಿಯು ಪರಲೋಕಯಾತ್ರೆಯನ್ನು ಪೂರೈಸಿದನು. ಆರ್ಯಾವರ್ತದ ಪ್ರಾಚೀನ ಋಷಿಗಳಂತೆ ಆದರ್ಶಜೀವನವನ್ನು ಬಗೆದ ಈ ರಷಋಷಿಯು ದೇವರ್ಷಿಯಾಗಲಿಕ್ಕೆಂದು ಅಮರಜನ್ಮವನ್ನು ಪಡೆದನು.

ಆ ಮಹರ್ಷಿಯ ಅಮರ ಜೀವನವು ನಮಗೆ ಸೂಕ್ಷ್ಮಶರೀರದ ವಿಧವಿಧದ ವಿಗ್ರಹಗಳಂತೊಪ್ಪುವ ದಿವ್ಯ ವಿಚಾರದ ನಾಲ್ವತ್ತರಷ್ಟು ಮಹಾಗ್ರಂಥಗಳನ್ನು ಸಲ್ಲಿಸಿದೆ. ಆ ಅಮೃತವನ್ನುಂಡು ಇನ್ನೆಷ್ಟು ಜನರು ದೇವಮಾನವರಾಗಲಿರುವರೋ ನೋಡುವಾ.

ಶ್ರೀ

# ಬಾಳಿನಲ್ಲಿ ಬೆಳಕು.

## ೧. ಪರಂಪರಾಗತ ಬುದ್ಧಿಯ ದಿವಾಳಿ.



ನಾನು ಸನಾತನ ಕ್ರಿಸ್ತೀಧರ್ಮದಲ್ಲಿ ದೀಕ್ಷೆಹೊಂದಿದ್ದೆನು. ಹಾಗೂ ಅದರಲ್ಲೇ ಬೆಳೆಸಲ್ಪಟ್ಟಿದ್ದೆನು. ಶೈಶವ ಮೊದಲುಗೊಂಡು ಇಡೀ ಬಾಲ್ಯ ಹಾಗೂ ತಾರುಣ್ಯದಲ್ಲಿ ನನಗೆ ಆ ಧರ್ಮದ ಶಿಕ್ಷಣವು ಸಿಕ್ಕಿದ್ದಿತು. ಆದರೆ ಹದಿನೆಂಟನೆಯ ವಯಸ್ಸಿನಲ್ಲಿ ವಿಶ್ವವಿದ್ಯಾಲಯದ ಎರಡನೆಯ ಕ್ಲಾಸಿಗೆ ಶರಣು ಹೊಡೆಯುವ ಹೊತ್ತಿಗೆ ಆ ಧರ್ಮದೊಳಗಿನ ನನ್ನ ವಿಶ್ವಾಸವು ಹಾರಿ ಹೋಯಿತು.

ನನಗೆ ನೆನಪಿರುವ ಮಟ್ಟಿಗೆ ನನ್ನ ಸುತ್ತಲಿನ ಹಿರಿ ವಯಸ್ಸಿನವರು ಕಲಿಸಿಕೊಟ್ಟ ಬೋಧನೆಯ ಬಗೆಗೆ ನನಗೆ ಎಂದೂ ಕಡುತರದ ನಂಬುಗೆ ಇರಲಿಲ್ಲ. ಅದನ್ನೇನೋ ನಾನು ಬರೇ ಆಶ್ರಯಿಸಿದ್ದೆನು. ಅದೂ ಕೂಡ ಅತಿ ಅಸ್ಥಿರವಾಗಿದ್ದಿತು.

ನನಗೆ ನೆನಪಿದೆ— ನಾನು ಹನ್ನೊಂದು ವರುಷದವನಿದ್ದಾಗ ಗ್ರಾಮರ್ ಸ್ಕೂಲಿನ ಒಬ್ಬ ವಿದ್ಯಾರ್ಥಿಯು ಒಂದು ರವಿವಾರ ದಿನ ನಮಗೆ ಭೆಟ್ಟಿಯಾದಾಗ ತಮ್ಮ ಶಾಲೆಯಲ್ಲಾದ ಒಂದು ರಂಜಕವಾದ ಸಂಶೋಧನವನ್ನು ಕುರಿತು ಸಮಾಚಾರವನ್ನು ಹೇಳಿದನು. ಅದೇನಂದರೆ—"ದೇವರೆನ್ನುವಂತಹದೇನೂ ಇಲ್ಲನೇ ಇಲ್ಲ. ಆ ವಿಷಯದಲ್ಲಿ ನಮಗೆ ಬೋಧಿಸಲಾದುದೆಲ್ಲ ಕಟ್ಟು ಕಲ್ಪನೆ." (ಈ ಮಾತು ೧೮೩೮ ನೆಯ ಇಸವಿಯದು.) ಈ ಸುದ್ದಿಯನ್ನು ಕೇಳಿದ ನನ್ನ ಹಿರಿ ಅಣ್ಣಂದಿರಿಗೆಲ್ಲ ಅದರಲ್ಲಿ ಅತಿಶಯವಾಗಿ ಅಭಿರುಚಿ ಹುಟ್ಟಿತೆಂದು ನನ್ನ ನೆನಪಿಗೆ ಬರುತ್ತದೆ. ಆಗ ಅವರು ನನ್ನನ್ನೂ ತಮ್ಮ ಆಲೋಚನೆಗೆ ಸೇರಿಸಿಕೊಂಡರು. ಆದರಿಂದ

ನಮ್ಮೆಲ್ಲರಿಗೆ ಒಳ್ಳೇ ಹುರುಪು ಬಂದಿತು; ಮತ್ತು ಆ ಸಂಶೋಧನವು ಒಳ್ಳೆ ರೋಚಕವಾದುದೆಂದೂ, ತುಂಬಾ ಸಂಭವನೀಯವೆಂದೂ ಅದನ್ನು ನಾವು ಸ್ವೀಕರಿಸಿದೆವು.

ನನಗೆ ಇನ್ನೂ ಒಂದು ಮಾತು ನೆನಪಿಗೆ ಬರುತ್ತದೆ. ಅದೇನಂದರೆ— ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದ ನನ್ನ ಅಣ್ಣನೊಬ್ಬನು ತನ್ನ ಉದ್ರೇಕ ಪ್ರವೃತ್ತಿಗನುಸಾರವಾಗಿ ಒಮ್ಮೆಲೆ ಧರ್ಮಪರಾಯಣನಾಗಿ, ದಿನಾಲು ದೇವಾಲಯಕ್ಕೆ ಹೋಗುವುದನ್ನೂ, ವ್ರತೋಪವಾಸ ಮಾಡುವುದನ್ನೂ, ಶುದ್ಧ ನೈತಿಕ ಜೀವನ ಸಾಗಿಸುವುದನ್ನೂ ಆರಂಭಿಸಿದ್ದನು. ಅದಕ್ಕೆ ನಾವೆಲ್ಲರೂ ( ನನ್ನ ಉಳಿದ ಅಣ್ಣಂದಿರು ಸಹ) ಅವನಿಗೆ ಗೇಲಿ ಮಾಡಹತ್ತಿದೆವು. ಇಷ್ಟೇ ಅಲ್ಲ, ಅವನಿಗೆ ( ಜಲಪ್ರಳಯ ಕಾಲದಲ್ಲಿ ಲೋಕವನ್ನು ಉಳಿಸಿದ) "ನೂಹ" ನ ಹೆಸರಿನಿಂದ ಕೂಗುತ್ತಿದ್ದೆವು.

ನನ್ನಂತೆ ಶಿಕ್ಷಣ ಹೊಂದಿದ ನನ್ನ ವರ್ಗದ ಜನರಂತೆ ನನ್ನ ವಿಶ್ವಾಸವೂ ಲಯವಾಗತೊಡಗಿತು. ಬಹುತರವಾಗಿ ಒಬ್ಬರು ಇನ್ನೊಬ್ಬರಂತೆ ನಡೆಕೊಳ್ಳುವುದು ಲೋಕ ರೂಢಿ; ಇಂಥವರು ಧರ್ಮದ ಮೂಲ ತತ್ತ್ವವನ್ನು ಆಶ್ರಯಿಸುವದಕ್ಕೆ ಬದಲು, ತಿರುಗಿ ಕೇಳಿದರೆ ಸಾಮಾನ್ಯವಾಗಿ ಅದನ್ನೂ ವಿರೋಧಿಸುತ್ತಿರುತ್ತಾರೆ. ಧಾರ್ಮಿಕ ತತ್ವಜ್ಞಾನವು ಜೀವನದ ಒಂದು ಭಾಗವಾಗಿ ಆಚರಿಸಲ್ಪಡುವುದಿಲ್ಲ. ಅದನ್ನು ಜೀವನದಿಂದ ಸ್ವತಂತ್ರವಾಗಿಯೂ, ಬಹುದೂರವಾಗಿಯೂ ಎಣಿಸುತ್ತಾರೆ. ಅದನ್ನು ಒಳಗೊಳ್ಳುವುದೇ ಆದರೆ ಅದು ಹೊರಗಿನ ತೋರಿಕೆಗಾಗಿ ಮಾತ್ರವೇ. ಜೀವನಕ್ಕೂ ಅದಕ್ಕೂ ಹತ್ತುಗಡೆಯೇ ಇರುವುದಿಲ್ಲ.

ಯಾವನೊಬ್ಬನ ಜೀವನ ಹಾಗೂ ನಡತೆ ಇವುಗಳ ಮೇಲಿಂದ ಆತನು ಆಸ್ತಿಕನೋ, ನಾಸ್ತಿಕನೋ ಎಂದು ನಿರ್ಣಯಿಸುವದಕ್ಕಾಗುವದಿಲ್ಲ. ಒಬ್ಬನು ಜನಜನಿತವಾಗಿ ಕರ್ಮಠ ಧಾರ್ಮಿಕತನವನ್ನು ಒಪ್ಪಿಕೊಳ್ಳುವವನೂ, ಇನ್ನೊಬ್ಬನು ಅದನ್ನು ಒಪ್ಪಿಕೊಳ್ಳದವನೂ ಇದ್ದಾರೆಂದರೆ ಅಷ್ಟು ಮಾತ್ರಕ್ಕೆ ಮೊದಲಿನವನು ಶ್ರೇಷ್ಠನಾಗಲಾರನು. ಎಂದಿ

ನಿಂದಲೂ—ಮಂದರೂ, ಕ್ರೂರರೂ ಆಗಿರುವವರೊಳಗೇ ತಮಗೆ ತಾವೇ ಮಹತ್ವವನ್ನು ಕೊಟ್ಟುಕೊಳ್ಳುವ ಇಂಥ ಕರ್ಮಠರು ಸಿಕ್ಕುವರು. ಆದರೆ ಇದಕ್ಕೆ ವಿಪರೀತವಾಗಿ ಯೋಗ್ಯತೆ, ಪ್ರಾಮಾಣಿಕತನ, ವಿಶ್ವಾಸಿಕತೆ, ಸುಸ್ವಭಾವ, ನೈತಿಕ ಆಚರಣೆ ಮುಂತಾದ ಸದ್ಗುಣಗಳು ನಾಸ್ತಿಕರೆನಿಸಿಕೊಳ್ಳುವವರಲ್ಲಿಯೇ ಅಡಿಗಡಿಗೆ ಕಂಡುಬರುವವು. ಬರೆ ನಂಬುಗೆ ಹಾಗೂ ಹೊರಗಿನ ಒತ್ತಾಯ ಇವುಗಳ ಮೂಲಕ ಒಪ್ಪಿಕೊಂಡ ಧಾರ್ಮಿಕ ತತ್ವವು ಅದನ್ನು ವಿರೋಧಿಸುವ ತಿಳುವಳಿಕೆ ಮತ್ತು ಜೀವನದ ಅನುಭವ ಇವುಗಳ ಪ್ರಭಾವದ ಮೂಲಕ ಕ್ರಮವಾಗಿ ಕರಗಿ ಹೋಗುವದು. ಆದರೆ ಜನರು ಬಾಲ್ಯದಲ್ಲಿ ಲಭಿಸಿದ ಧಾರ್ಮಿಕ ತತ್ವವನ್ನೇ ಇನ್ನೂ ಗಟ್ಟಿಯಾಗಿ ಹಿಡಿದುಕೊಂಡಿದ್ದೇವೆಂದು ಕಲ್ಪಿಸುತ್ತಿರುತ್ತಾರೆ. ನಿಜವಾಗಿ ನೋಡಿದರೆ ಅದರ ಲವಲೇಶವೂ ಕೂಡ ಅವರಲ್ಲಿ ಉಳಿದಿರುವುದಿಲ್ಲ.

ಬುದ್ಧಿವಂತನೂ ಪ್ರಾಮಾಣಿಕನೂ ಎಂದು ನಾನು ತಿಳಿದುಕೊಂಡಿರುವಂಥವನೊಬ್ಬನು ತನ್ನ ಶ್ರದ್ಧೆ ಹಾರಿಹೋದುದರ ಕಥೆಯನ್ನು ಹೇಳಿದ್ದು ಹೇಗೆಂದರೆ—ಅವನು ಇಪ್ಪತ್ತಾರು ವರುಷದವನಿದ್ದಾಗ ಒಮ್ಮೆ ಬೇಟೆಗೆಂದು ಹೋದಲ್ಲಿ ರಾತ್ರಿ ಇಳಕೊಂಡ ಸ್ಥಳದಲ್ಲಿ ಬಾಲ್ಯದಿಂದಲೂ ರೂಢವಾಗಿರುವ ಮೇರೆಗೆ ಮೊಳಕಾಲೂರಿ ಪ್ರಾರ್ಥನೆ ಮಾಡಿದನು. ಜೊತೆಗಿದ್ದ ಅವನ ಅಣ್ಣನು ಅದನ್ನೆಲ್ಲ ನೋಡುತ್ತ ಹುಲ್ಲಮೇಲೆ ಮಲಗಿದ್ದನು. ಅವನು ಇರುಳಲ್ಲಿ ತನ್ನ ತಮ್ಮನಿಗೆ— "ಇನ್ನೂ ನೀನು ಇದನ್ನು ಮಾಡುತ್ತೀಯಾ ? " ಎಂದು ಅಂದನು.

ಇದಕ್ಕಿಂತ ಹೆಚ್ಚಿಗೇನೂ ಅವರಲ್ಲಿ ಮಾತುಕತೆ ನಡೆಯಲಿಲ್ಲ. ಆದರೂ ಆ ತಮ್ಮನು ಅಂದಿನಿಂದ ಪ್ರಾರ್ಥನೆ ಮಾಡುವದನ್ನೂ, ದೇವಾಲಯಕ್ಕೆ ಹೋಗುವದನ್ನೂ ಬಿಟ್ಟುಕೊಟ್ಟು ಈಗ ಮೂವತ್ತು ವರುಷಗಳಾದವು. ಇಲ್ಲಿ ಆತನು ತನ್ನ ಅಣ್ಣನ ಆಂತರಿಕ ವಿಶ್ವಾಸವನ್ನು ಅರಿತಾಗಲೀ ಸ್ವತಃದ ಆತ್ಮ ನಿಶ್ಚಯವನ್ನು ಮಾಡಿಕೊಂಡಾಗಲೀ ಹಾಗೆ

ನಿರ್ಧರಿಸಿವನೆಂತಲ್ಲ. ಆದರೆ ಕೇವಲ ಅಣ್ಣನ ಆ ಶಬ್ದವು, ಮೊದಲೇ ತನ್ನ ಭಾರದಿಂದ ತಾನೇ ಬೀಳಲಿಕ್ಕಾಗಿರುವ ಗೋಡೆಗೆ ಬೆರಳು ತಾಕಿಸಿದಂತಾಯಿತು. ತನ್ನಲ್ಲಿ ಶ್ರದ್ಧೆ ತುಂಬಿಕೊಂಡಿದೆ ಎಂದಿರುವ ಸ್ಥಳವು ಬರಿಯ ಬಟ್ಟಬಯಲಾಗಿದೆಯೆಂದೂ, ತನ್ನ ಪ್ರಾರ್ಥನೆಯ ಶಬ್ದಗಳೂ ಧರಿಸುವ ಧರ್ಮಚಿಹ್ನೆಗಳೂ ತನ್ನೊಳಗಿನ ಜೀವವನ್ನು ಕಳಕೊಂಡಿವೆಯೆಂದೂ ಆ ಶಬ್ದವು ಆತನಿಗೆ ತೋರಿಸಿಕೊಟ್ಟಮೇಲೆಯೂ ಕೂಡ ಆತನು ಅಂಥವುಗಳನ್ನು ಹೇಗೆ ಸಾಗಿಸಿಯಾನು?

ಬಹು ಜನರ ಸ್ಥಿತಿಯು ಹೀಗೇ ಇದೆಯೆಂದು ನಾನು ತಿಳಿಯುತ್ತೇನೆ. ಒಳಗಿದ್ದಂತೆ ಹೊರಗಿರಬಲ್ಲ ನನ್ನ ವರ್ಗದ ಸುಶಿಕ್ಷಿತರನ್ನು ಕುರಿತು ನಾನೀಗ ಹೇಳುತ್ತಿದ್ದುದು.ಇಂಥವರು ಸಾಂಸಾರಿಕ ಕ್ರಿಯೆಗಳನ್ನು ಸಾಧಿಸುವದಕ್ಕಾಗಿ ಶ್ರದ್ಧೆಯ ಡಂಗುರವನ್ನು ಸಾರುವಂಥವರಾಗಿರುವದಿಲ್ಲ. (ಹೀಗೆ ಮಾಡುವವರು ಅತಿ ಮುಖ್ಯನಾಸ್ತಿಕರು. ಸಾಂಸಾರಿಕ ಲಾಭಕ್ಕೂ ಶ್ರದ್ಧೆಗೂ ಗಂಟು ಹಾಕುವದಾದರೆ ನಿಶ್ಚಯವಾಗಿಯೂ ಅದು ಶ್ರದ್ಧೆಯೇ ಅಲ್ಲ.)

ಚಿಕ್ಕಂದಿನಿಂದ ಬೋಧಿಸಲ್ಪಟ್ಟ ಧಾರ್ಮಿಕ ಸಿದ್ಧಾಂತಗಳೆಲ್ಲ ಎಲ್ಲರಂತೆ ನನ್ನೊಳಗಿಂದಲೂ ಮಟ್ಟಮರೆಯಾದವು. ಆದರೆ ಒಂದು ವ್ಯತ್ಯಾಸವೇನಂದರೆ ನನ್ನ ಹದಿನೈದನೆಯ ವಯಸ್ಸಿನಿಂದ ನಾನು ತತ್ವಜ್ಞಾನಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಓದಲಾರಂಭಿಸಿದೆನಲ್ಲದೆ, ನಾನು ಹೀಗೆ ತ್ಯಜಿಸಿದ್ದನ್ನೆಲ್ಲ ಬಹಳ ಎಳೆವಯಸ್ಸಿನಿಂದಲೇ ಅರಿತರಿತು ತ್ಯಜಿಸಿದ್ದೆನು. ಆ ಕಾಲದಿಂದ ಅಂದರೆ ನನ್ನ ಹದಿನಾರನೇ ವಯಸ್ಸಿನಿಂದ ಪ್ರಾರ್ಥನೆ, ದೇವಾಲಯ, ವ್ರತೋಪವಾಸ ಮೊದಲಾದವುಗಳನ್ನೆಲ್ಲ ಬಿಟ್ಟುಕೊಟ್ಟೆನು. ಚಿಕ್ಕಂದಿನಲ್ಲಿ ನನಗೆ ಬೋಧಿಸಿದ್ದರ ಮೇಲೆ ನನಗಾಗ ವಿಶ್ವಾಸ ತಪ್ಪಿತಾದರೂ ನನ್ನದು ನನಗೇ ಹೇಳಲಿಕ್ಕಾಗದ ಇನ್ನೊಂದಾವುದರ ಮೇಲೋ ನನ್ನ ಶ್ರದ್ಧೆಯು ಇದ್ದೇ ಇದ್ದಿತು.

ಹಿಂದಿನ ಆ ದಿನಗಳನ್ನು ಈಗ ನೆನಸಿಕೊಂಡಾಗ ನನಗೆ ಸ್ಪಷ್ಟವಾಗಿ ತೋರುವುದೇನಂದರೆ— ನನ್ನ ಪಾಶವಿಕಪ್ರವೃತ್ತಿ (**Animal**

**instincts** ) ಗಳಿಂದ ಭಿನ್ನವಾದ ಮತ್ತು ನನ್ನ ಜೀವನ ಚಕ್ರಕ್ಕೆ ಪ್ರಚೋದನವನ್ನಿತ್ತ **ಸತ್ಯಶ್ರದ್ಧೆಯೊಂದು ಆಗಲೂ ನನ್ನಲ್ಲಿ ಇದ್ದಿತು. ನನ್ನನ್ನು ನಾನು ಪರಿಪೂರ್ಣಗೊಳಿಸಬಲ್ಲೆನೆಂಬ ನಂಬುಗೆಯೇ ಅದು.** ಆದರೆ ಈ ಪರಿಪೂರ್ಣತೆಯ ಅರ್ಥವೂ ಉದ್ದೇಶವೂ ಮಾತ್ರ ನನಗೆ ತಿಳಿದಿರಲಿಲ್ಲ. ನನ್ನ ಮಾನಸಿಕ ಪರಿಪೂರ್ಣತೆಯ ಸಲುವಾಗಿ ನನಗೆ ಶಕ್ಯವಿರುವಷ್ಟು ವಿಷಯಗಳನ್ನೆಲ್ಲ ಅಭ್ಯಾಸ ಮಾಡಿದೆ; ನನ್ನ ಸಂಕಲ್ಪ ಶಕ್ತಿಯನ್ನು ಬೆಳಿಸಿಕೊಳ್ಳುವ ಸಲುವಾಗಿ ಎಷ್ಟೋ ನಿಯಮಗಳನ್ನು ಹಾಕಿಕೊಂಡೆ ; ದೇಹಶಕ್ತಿಗಾಗಿ ಬಗೆಬಗೆಯ ವ್ಯಾಯಾಮಗಳನ್ನು ಮಾಡಿದೆ. ಸರ್ವಪ್ರಕಾರದ ಕಷ್ಟನಷ್ಟಗಳ ಸಹಾಯದಿಂದ ಸಹನ ಶೀಲ ತೆಯನ್ನೂ ಧೀರತ್ವವನ್ನೂ ಗಳಿಸಿಕೊಂಡೆನು. ಪರಿಪೂರ್ಣತೆಗೆ ಇವೆ ಲ್ಲವುಗಳು ಅತ್ಯಾವಶ್ಯಕವೆಂದು ಬಗೆದೆನು. ಮೊದಮೊದಲಿಗೆ ನೈತಿಕ ಪರಿಪೂರ್ಣತೆಯೊಂದೇ ನನ್ನ ಗುರಿಯಾಗಿದ್ದದ್ದು ಮುಂದೆ ಬೇಗನೆಯ ಎಲ್ಲಬಗೆಯಿಂದ ಪರಿಪೂರ್ಣನಾಗಬೇಕೆಂಬುದಕ್ಕೆ ಬಂದಿತು. ಉತ್ತಮ ನಾಗುವದೆಂದರೆ ಬರಿ ನನ್ನ ದೃಷ್ಟಿಯಿಂದಾಗಲಿ ದೇವನ ದೃಷ್ಟಿಯಿಂದಾಗಲಿ ಇಷ್ಟೇ ಅಲ್ಲ; ಜನದ ದೃಷ್ಟಿಯಿಂದಲೂ ಹಾಗಾಗಬೇಕೆಂದೆನು. ಆದರೆ ಶೀಘ್ರದಲ್ಲಿಯೇ ಈ ಪ್ರಯತ್ನವು ಇನ್ನೊಂದು ಬಗೆಯ ವಾಸನೆಯಾಗಿ ಮಾರ್ಪಟ್ಟಿತು. ನಾನು ಉಳಿದವರಿಗಿಂತ ಹೆಚ್ಚು ಬಲಿಷ್ಠನಾಗಬೇಕು. ಮತ್ತು ಅನ್ಯರಿಗಿಂತ ಹೆಚ್ಚು ಪ್ರಖ್ಯಾತನೂ, ಗಣ್ಯನೂ, ಧನಿಕನೂ ಆಗಬೇಕು. ಎಂಬುದೇ ಅದು.

---

## ೨. ಲೇಖಕ ವರ್ಗದ ಭ್ರಾಂತಿ.

ನಾನು ಒಳ್ಳೆಯವನಾಗುವುದಕ್ಕೆ ಸರ್ವಾಂತಃಕರಣದಿಂದ ಇಚ್ಛಿಸಿದೆನು. ಆದರೆ ನಾನಾಗ ತರುಣನೂ, ವಿಕಾರಿಯೂ, ಏಕಾಂಗಿಯೂ ಆಗಿದ್ದೆನು. ನೀತಿ ವಿಚಾರದಲ್ಲಿ ಅತ್ಯುತ್ತಮನಾಗಬೇಕೆಂದಿರುವ ನನ್ನ ಶುದ್ಧ ಆಶೆಯನ್ನು ಹೊರಪಡಿಸಲೆಳಸಿದಾಗಲೆಲ್ಲ ಜನರಿಂದ ನನಗೆ ಅಪಹಾಸವೂ, ತಾತ್ಸಾರವೂ ಲಭಿಸುತ್ತಿದ್ದವು. ಆದರೆ ನಾನು ಅಸಹ್ಯ ವಿಕಾರಗಳಿಗೆ ವಶವರ್ತಿಯಾದಾಗ ಪ್ರಶಂಸೆಯೂ, ಬೆಂಬಲವೂ ದೊರೆಯುತ್ತಿದ್ದವು. ನಾನು ದೊಡ್ಡವರಂತೆ ಗರ್ವಕೋಪಗಳಿಗೆ ವಶನಾಗಿ ನಡೆದುಕೊಂಡಾಗ ಜನರಿಗೆ ನನ್ನ ವಿಷಯದಲ್ಲಿ ಆದರವುಂಟಾದುದನ್ನು ಕಂಡೆನು. ಸಾತ್ವಿಕಳಾದ ನನ್ನ ಅಕ್ಕರತೆಯ ಚಿಕ್ಕವ್ವನೊಬ್ಬಳು ನನ್ನ ವಿಷಯದಲ್ಲಿ ತನಗಿರುವ ಬಲವಾದ ಇಚ್ಛೆಯನ್ನು ಹೀಗೆ ಆಡಿ ತೋರಿಸಿದಳು:— ಒಬ್ಬ ವಿವಾಹಿತ ಸ್ತ್ರೀಯೊಡನೆ ನನ್ನ ಸಂಬಂಧವುಂಟಾಗಬೇಕು. ನಾನು ರಾಜಾಶ್ರಯವುಳ್ಳ ಒಬ್ಬ ಅಧಿಕಾರಿಯಾಗಬೇಕು. ದಾಸದಾಸಿಯರನ್ನು ಜೊತೆಗೆ ತರಬಹುದಾದ ಶ್ರೀಮಂತರ ಕನ್ಯೆಯನ್ನು ನಾನು ಮದುವೆಯಾಗಬೇಕು............

ಆ ಕಾಲದ ನನ್ನ ಜೀವನವನ್ನು ನೆನಸಿಕೊಂಡರೆ ಭಯವೂ, ಲಜ್ಜೆಯೂ, ಅನುಕಂಪವೂ ಉಂಟಾಗದಿರದು. ಕಾಳಗದಲ್ಲಿ ಜನರನ್ನು ಕೊಂದೆನು. ಇಸ್ಪೀಟುಗಳನ್ನಾಡಿ ಒಕ್ಕಲಿಗರ ದುಡುಮೆಯಿಂದ ಬಂದ ಧನವನ್ನು ಹಾಳುಮಾಡಿದೆನು. ಅವರನ್ನು ದಂಡನೆಗೆ ಗುರಿಮಾಡಿದೆನು. ಸಿಕ್ಕಂತೆ ನಡೆದನು. ಜನರನ್ನು ಮೋಸಗೊಳಿಸಿದೆನು. ಸುಳ್ಳು ಕಳವು, ಎಲ್ಲ ಬಗೆಯ ವ್ಯಭಿಚಾರ, ಕುಡುಕತನ, ಹಿಂಸೆ, ಕೊಲೆ ನಾನು ಮಾಡದ ದುಷ್ಕೃತ್ಯವೊಂದೂ ಉಳಿದಿರಲಿಲ್ಲ. ಆದರೆ ಇವೆಲ್ಲವುಗಳ ಸಲುವಾಗಿಯೂ ಜನರು ನನ್ನ ನಡತೆಯನ್ನು ಪ್ರಶಂಸಿಸುತ್ತಲೇ ಇದ್ದರು.

ನನ್ನಂತಿದ್ದ ನನ್ನ ಸಮಕಾಲಿಕರೂ ನನ್ನಂತೆಯೇ ನೀತಿವಂತರೆಂದು ಎಣಿಸಲ್ಪಡುತ್ತಿದ್ದರು; ಮತ್ತು ಅವರು ನನ್ನನ್ನೂ ಹಾಗೆಯೇ ಎಣಿಸುತ್ತಿದ್ದರು.

ನಾನು ಹೀಗೆ ಹತ್ತುವರುಷಗಳನ್ನು ಕಳೆದೆನು. ಆ ಕಾಲ ಮೊದಲ್ಗೊಂಡು ನಾನು ದಂಭ, ಲೋಭ, ಈರ್ಷೆಗಳಿಂದ ಬರವಣಿಗೆಗೆ ಮೊದಲು ಮಾಡಿದೆನು. ಜೀವನದಲ್ಲಿಯೂ, ಬರವಣಿಗೆಯಲ್ಲಿಯೂ ಹಾಗೆಯೇ ಧನವನ್ನೂ, ಕೀರ್ತಿಯನ್ನೂ ಗಳಿಸುವುದಕ್ಕಾಗಿ (ನಾನುಲೇಖನ ಕಾರ್ಯವನ್ನು ಕೈಕೊಂಡಿದ್ದು ಇದಕ್ಕಾಗಿಯೇ.) ಒಳ್ಳೆಯದನ್ನು ಮುಚ್ಚಿಡುವುದೂ, ಕೆಟ್ಟದ್ದನ್ನು ತೋರಿಸಿಕೊಳ್ಳುವುದೂ ಅಗತ್ಯವಾಗಿದ್ದಿತು. ನಾನು ಹಾಗೇ ಮಾಡಿದೆನು. ಯಾವುದು ನನಗೆ ಜೀವನದ ಅರ್ಥವನ್ನು ಕೊಟ್ಟಿತೋ ಅಂಥ—'ಒಳ್ಳೆಯವನಾಗಬೇಕೆಂ'ದಿರುವ ನನ್ನ ಪ್ರಯತ್ನವನ್ನು ನನ್ನ ಬರವಣಿಗೆಯಲ್ಲೆಲ್ಲಾ ಬೇಕಂತಲೇ ಬಚ್ಚಿಡಲೆಳಸಿ ಆ ವಿಷಯದಲ್ಲಿ ತಟಸ್ಥ ವೃತ್ತಿಯ ವಾಕ್ಯಗಳನ್ನು ಉಪಯೋಗಿಸುತ್ತಿದ್ದೆನು. ಇಲ್ಲವೆ ಒಮ್ಮೊಮ್ಮೆ ಅದನ್ನು ಅಪಹಾಸ ಮಾಡುತ್ತಲೂ ಇದ್ದೆನು! ಇದು ನನಗೆ ತುಂಬಾ ಸಾಧಿಸಿದ್ದರಿಂದ ವಿಶೇಷ ಗೌರವಕ್ಕೆ ಪಾತ್ರನಾದೆನು.

ನನ್ನ ಇಪ್ಪತ್ತಾರನೇ ವಯಸ್ಸಿನಲ್ಲಿ ಯುದ್ಧ ಪರಿಸಮಾಪ್ತಿಯ ನಂತರ ಸೇಂಟ್‌ಪೀಟರ್ಸ್‌ಬರ್ಗಕ್ಕೆ (ರಾಜಧಾನಿಗೆ) ಹೋದಾಗ ನನಗೆ ಅಲ್ಲಿಯ ಗ್ರಂಥಕಾರರ ಭೆಟ್ಟಿಯಾಯಿತು. ಅವರು ನನ್ನನ್ನು ತಮ್ಮೊಳಗಿನವನೊಬ್ಬನಂತೆ ಸ್ವಾಗತಿಸಿ ಮುಖಸ್ತುತಿ ಮಾಡಿದರು. ಆಗ ಹೆಚ್ಚು ವಿಚಾರ ಮಾಡದೆ ನಾನು ಜೀವನದ ಬಗ್ಗೆ ಅವರಿಗಿದ್ದ ಭಾವನೆಗಳನ್ನೇ ಸ್ವೀಕರಿಸಿದೆನು. ಸುಧಾರಿಸಿಕೊಳ್ಳಬೇಕೆಂದಿದ್ದ ನನ್ನ ಮುಂಚಿನ ಹವಣಿಕೆಗಳನ್ನೆಲ್ಲ ಆ ಭಾವನೆಗಳು ಸಂಪೂರ್ಣವಾಗಿ ಅಳುಕಿಸಿ ಬಿಟ್ಟವು. ಆ ಭಾವನೆಗಳು ನನ್ನ ಜೀವನದ ಲಂಪಟವೃತ್ತಿಯನ್ನು ಪುಷ್ಟೀಕರಿಸುವ ಒಂದು ವಿಚಾರಪದ್ಧತಿಯನ್ನು ಸಜ್ಜುಗೊಳಿಸಿದವು.

ಜೀವನದ ಬಗ್ಗೆ ಆ ಲೇಖಕ ವರ್ಗಕ್ಕಿದ್ದ ಭಾವನೆಯೇನೆಂದರೆ— ಸಾಧಾರಣವಾಗಿ ಜೀವನವು ಅಭಿವೃದ್ಧಿ ಹೊಂದುತ್ತ ನಡೆದಿರುತ್ತದೆ. ಈ ಅಭಿವೃದ್ಧಿಯಲ್ಲಿ ವಿಚಾರಶೀಲರಾದ ನಮ್ಮಂಥವರ ಭಾಗವು ಮುಖ್ಯವಾದದ್ದಿರುತ್ತದೆ. ಅವರಲ್ಲಿಯೂ ವಿಚಾರಶೀಲರೆಂಬವರೊಳಗೆ ಕಲಾವಿದರು ಹಾಗು ಕವಿಗಳು ಇವರ ಪ್ರಭಾವವು ತೀರಹೆಚ್ಚಿನದು. ಮಾನವ ಕೋಟಿಗೆ ಬುದ್ಧಿಯನ್ನು ಕಲಿಸುವುದೇ ನಮ್ಮ ಉದ್ಯೋಗವು. 'ನಾನು ಅರಿತದ್ದು ಎಷ್ಟು? ಏನು ಕಲಿಸಿಕೊಡಬಲ್ಲೆನು?' ಎಂಬ ಪ್ರಶ್ನೆಗೆ ಅವಕಾಶವೇ ಇಲ್ಲ. ಅವರ ವಿಚಾರಪದ್ಧತಿಯಲ್ಲಿ ಅದನ್ನರಿತುಕೊಳ್ಳುವುದರ ಅಗತ್ಯವೇ ಇಲ್ಲವೆಂಬುದಿದ್ದಿತು. ಯಾಕೆಂದರೆ ಕಲಾವಿದರೂ ಕವಿಗಳೂ ಬೋಧಿಸುವುದು ಅವಿದಿತವಾಗಿಯೇ. ನಾನೊಬ್ಬ ಶ್ಲಾಘನೀಯ ಕಲಾವಿದನೆಂದೂ, ಕವಿಯೆಂದೂ ಗಣಿಸಲ್ಪಡುತ್ತಿದ್ದದರಿಂದ, ನಾನೀ ವಿಚಾರಪದ್ಧತಿಯನ್ನು ಸ್ವೀಕರಿಸಿದ್ದು ಸ್ವಾಭಾವಿಕವೇ ಇದೆ. ಕಲಾವಿದನೂ ಕವಿಯೂ ಆದ ನಾನು ಬರೆದೆ; ಬೋಧಿಸಿದೆ. ಆದರೆ 'ಏನು' ಎಂಬುದನ್ನು ಸ್ವತಃ ನಾನೇ ಅರಿತಿರಲಿಲ್ಲ. ಈ ಕೆಲಸದಲ್ಲಿ ನನಗೆ ಧನಲಾಭವಾಯ್ತು. ಉತ್ಕೃಷ್ಟವಾದ ಅನ್ನ, ವಾಸಸ್ಥಾನ, ಕಾಮಿನಿಯರು ಮತ್ತು ಸಹವಾಸ ಇವೆಲ್ಲ ಲಭಿಸಿದವು. ಅಲ್ಲದೆ ನನ್ನ ಬೋಧನೆಯು ಅತ್ಯುತ್ತಮವಾಗಿದ್ದಿತೆಂಬುದಕ್ಕೆ ದ್ಯೋತಕವಾದ ಕೀರ್ತಿಯೂ ನನಗೆ ದೊರಕಿತು.

ಈ ಬಗೆಯ ಜೀವನವನ್ನು ಎರಡು ಮೂರು ವರುಷ ಸಾಗಿಸುವದರೊಳಗಾಗಿ ನನಗೆ ಅದರ ಸತ್ಯತೆಯ ಬಗ್ಗೆ ಸಂದೇಹ ಹುಟ್ಟಿ ನಾನದನ್ನು ಪರೀಕ್ಷಿಸತೊಡಗಿದೆನು. ನನ್ನ ಸಂದೇಹದ ಮೊದಲನೇ ಕಾರಣವಾವುದೆಂದರೆ— ಗ್ರಂಥಕಾರರೊಳಗೆ ಪರಸ್ಪರ ಸಹಮತವಿಲ್ಲದಿರುವುದೇ. 'ನಮ್ಮ ಬೋಧನೆಯೇ ಸತ್ಯ. ಉಳಿದವರೆಲ್ಲ ಮಿಥ್ಯಾಬೋಧಕರು' ಎಂದು ಅವರು ಒಬ್ಬರಿಗೊಬ್ಬರು ಸೆಣಸಾಡುತ್ತಿದ್ದರು. ಕದನ, ಬೈಗಳು, ನಿಂದೆ, ಕುತಂತ್ರ, ಟೀಕೆ ಇವು ಪರಸ್ಪರರಲ್ಲಿ ನಡೆದೇ ಇದ್ದವು. ಇವೆಲ್ಲದರ ಪುಣ್ಯದಿಂದ ನಾನು ನಮ್ಮ ತತ್ವದ ಸ್ಥಿರತ್ವದ ಬಗ್ಗೆ ಸಂದೇಹವುಳ್ಳವನಾದೆನು.

ಗ್ರಂಥಕಾರರ ಸಿದ್ಧಾಂತದ ಬಗ್ಗೆ ಸಂದೇಹವುಂಟಾದಮೇಲೆ ನಾನವರನ್ನು ಬಹು ಲಕ್ಷ್ಯಪೂರ್ವಕವಾಗಿ ನಿರೀಕ್ಷಿಸತೊಡಗಿದೆನು. ಅವರು ಅನೀತಿವಂತರೂ, ದುಷ್ಟರೂ, ಠಕುಳರೂ ಆಗಿದ್ದರು. ಇಷ್ಟೇ ಅಲ್ಲ, ನನ್ನ ಮುಂಚಿನ ಸೈನಿಕ ಜೀವನದಲ್ಲಿ ಭೆಟ್ಟಿಯಾದ ಸಾಧಾರಣ ಜನರಿಗಿಂತಲೂ ಅವರು ಕಡಿಮೆತರಗತಿಯವರಾಗಿದ್ದರು. ಆ **ಸಾಮಾನ್ಯರೆಂಬವರು ಪವಿತ್ರತೆಯ ಅರ್ಥವನ್ನರಿಯದೆಯೂ ಪವಿತ್ರರಾಗಿದ್ದರು.** ನನ್ನ ವರ್ಗದವರು ನನ್ನನ್ನು ವಿರೋಧಿಸಿದರು. ನಾನು ನನ್ನೊಡನೆ ವಿರೋಧಿಸಹತ್ತಿದೆನು. ಮತ್ತು ಆ ಕಾಲದ ದೃಷ್ಟಿಯು ಜೊಳ್ಳಾಗಿದ್ದುದನ್ನು ಮನಗಂಡೆನು.

ಆದರೆ ಆಶ್ಚರ್ಯವೇನೆಂದರೆ— ಜೊಳ್ಳನ್ನರಿತೂ ಕೂಡ ಆ ವರ್ಗದವರಿಂದ ನನಗೆ ಬರುತ್ತಿದ್ದ ಅಂತಸ್ತನ್ನು ನಾನು ಬಿಟ್ಟುಕೊಟ್ಟಿರಲಿಲ್ಲ.

ಈ ಜನರ ಸಹವಾಸದಿಂದ ನಾನು ಹೊಸದಾಗಿ ಗಳಿಸಿಕೊಂಡ ದುರ್ಗುಣಗಳೆಂದರೆ— ಮಿತಿಮೀರಿ ಬೆಳೆದಗರ್ವ, ಮಾನವರಿಗೆ ಬುದ್ಧಿ ಹೇಳುವವನೆಂಬ ಹುಚ್ಚು ನಂಬುಗೆ. ಆ ಕಾಲದ ನನ್ನ **ಹಾಗೂ ನನ್ನಂಥವರ ಮನಸ್ಥಿತಿಯನ್ನು ನೆನಿಸಿಕೊಂಡರೆ ಹುಚ್ಚರ ಆಸ್ಪತ್ರೆಯಲ್ಲಿರುವವರಿಗೂ ನಮಗೂ ಭೇದವೇ ತೋರುವದಿಲ್ಲ.**

ಉಪನ್ಯಾಸ ಮಾಡುವುದು, ಲೇಖ ಬರೆಯುವದು, ಪುಸ್ತಕಗಳನ್ನು ಅಚ್ಚುಹಾಕಿಸುವುದು ಇವುಗಳನ್ನೆಲ್ಲ ಜಗದ್ಧಿತಾರ್ಥವಾಗಿ ಶಕ್ಯವಿದ್ದಷ್ಟು ಬೇಗಬೇಗನೆ ಮಾಡುವ ಅಗತ್ಯವಿದೆಯೆಂದು ನಾವಾಗ ನಂಬಿಕೊಂಡಿದ್ದೆವು. ಆದರೆ 'ಯಾವುದೊಳ್ಳೆಯದು, ಯಾವುದು ಕೆಟ್ಟದು' ಎಂಬಂಥ ಜೀವನದ ಸುಲಭ ಪ್ರಶ್ನವನ್ನೂ ಕೂಡ ನಾವು ಬಿಡಿಸಲಾರದವರಾಗಿದ್ದೆವು. ಒಬ್ಬರಿಗೊಬ್ಬರು ಪ್ರತಿಯಾಗಿ ಹೊಗಳಿಸಿಕೊಳ್ಳಬೇಕೆಂಬ ಇಚ್ಛೆಯಿಂದ ನಾವು ಪರಸ್ಪರ ಪ್ರಶಂಸೆ ಮಾಡುತ್ತಿದ್ದೆವು. ಒಮ್ಮೊಮ್ಮೆ ಹುಚ್ಚರ ಆಸ್ಪತ್ರೆಯೊಳಗಿನವರಂತೆ ಒಬ್ಬರಿಗೊಬ್ಬರು ಕೋಪಿಸಿಕೊಳ್ಳುತ್ತಲೂ ಇದ್ದೆವು.

ಸಾವಿರಾರು ಜನ ಕೆಲಸಗಾರರು ನಮ್ಮ ಪುಸ್ತಕಗಳ ಮುದ್ರಣದ ಸಲುವಾಗಿ ಹಗಲಿರಳು ಮಿತಿಮೀರಿ ದುಡಿದು ಕೋಟಿಗಟ್ಟಲೆ ಶಬ್ದಗಳನ್ನು ಮೊಳೆಗಳಿಂದ ಜೋಡಿಸುತ್ತಿದ್ದರು. ಪೋಸ್ಟಿನವರು ಅವುಗಳನ್ನು ಹೊತ್ತು ದೇಶದ ತುಂಬಾ ಹರವುತ್ತಿದ್ದರು. ಆದರೆ ನಾವಿನ್ನೂ ಬೋಧಿಸುತ್ತಲೇ ಇದ್ದೆವು. ಹೆಚ್ಚಿಗೆ ಬೋಧಿಸಲಿಕ್ಕೆ ವೇಳೆ ಸಾಲದೆನ್ನುತ್ತಿದ್ದೆವು. ಅಲ್ಲದೆ ನಮ್ಮ ಬಗ್ಗೆ ಲೋಕವು ತಕ್ಕಷ್ಟು ಲಕ್ಷ್ಯವನ್ನು ಪೂರೈಸುವದಿಲ್ಲವೆಂದು ಯಾವಾಗಲೂ ಸಿಟ್ಟಿಗೇಳುತ್ತಿದ್ದೆವು.

ನಮ್ಮ ಲಾಭಕ್ಕಾಗಿ ನಾವು ಯುಕ್ತಿಯಿಂದ ಒಂದು ವಿಚಾರ ಪದ್ಧತಿಯನ್ನು ಸ್ಥಿರಗೊಳಿಸಿದ್ದೆವು. ಅದೇನಂದರೆ— "ಇದ್ದದ್ದೆಲ್ಲಾ ಸಂಯುಕ್ತಿಕವಾಗಿಯೇ ಇದೆ. ಮತ್ತು ಇದ್ದದ್ದೆಲ್ಲಾ ಅಭಿವೃದ್ಧಿ ಹೊಂದುತ್ತಲೇ ಇರುತ್ತದೆ. ಹೀಗೆ ಬೆಳೆಯುತ್ತಿರುವುದೆಲ್ಲಾ ನಮ್ಮ ಸಂಸ್ಕೃತಿಯ ಹಿತಕ್ಕಾಗಿಯೇ. ಸಂಸ್ಕೃತಿಯನ್ನು ಅಳೆಯುವುದು ಗ್ರಂಥಗಳ ಹಾಗು ವೃತ್ತಪತ್ರಗಳ ವ್ಯಾಪ್ತಿಯಿಂದಲೇ. ಲೋಕವು ನಮಗೆ ಧನವನ್ನೂ ಮಾನವನ್ನೂ ಅರ್ಪಿಸಬೇಕು. ಯಾಕೆಂದರೆ ನಾವು ಗ್ರಂಥಗಳನ್ನೂ ವೃತ್ತಪತ್ರಗಳನ್ನೂ ನಿರ್ಮಿಸುತ್ತೇವೆ. ಅದಕ್ಕೆಂತಲೇ ನಾವು ಸರ್ವರಿಗಿಂತ ಶ್ರೇಷ್ಠರೂ, ಪ್ರಯೋಜನವುಳ್ಳವರೂ, ಆಗಿದ್ದೇವೆ." ಆದರೆ ನಮಗೆ ದುಡ್ಡನ್ನೂ, ಮಾನವನ್ನೂ ಸಲ್ಲಿಸುವವರನ್ನೇ ನಾವು ಮರೆತು ಬಿಟ್ಟೆವು ಮತ್ತೆ ನಮ್ಮದೇ ನ್ಯಾಯವೆಂದು ಭಾವಿಸುತ್ತಿದ್ದೆವು.

ಹೀಗೆ ಸ್ವತಃ ನಾವೇ ಹುಚ್ಚರಂತಿದ್ದು ಜನರನ್ನೆ ಹುಚ್ಚರೆಂದು ತಿಳಿಯುತ್ತಿದ್ದೆವು.



# ೩. ಯಕ್ಷ ಪ್ರಶ್ನೆ.

ಇಂಥ ಹುಚ್ಚಿಗೆ ಬಲಿಬಿದ್ದು ನನ್ನ ಮದುವೆಯ ಕಾಲದವರೆಗೆ ಆರು ವರುಷಗಳನ್ನು ಕಳೆದೆನು. ಆ ಕಾಲದಲ್ಲಿ ನಾನು ಪರದೇಶದ ಪ್ರವಾಸವನ್ನು ಬೆಳೆಸಿದೆನು. ಅಲ್ಲಿಯ ಮುಖ್ಯ ವಿದ್ಯಾವಂತರು ನನ್ನಂತೆಯೇ ಪೂರ್ಣತೆಗಾಗಿ ಪ್ರಯತ್ನಿಸುವುದರಲ್ಲಿ ಶ್ರದ್ಧೆಯುಳ್ಳವರಾಗಿದ್ದರು. ಆ ಶ್ರದ್ಧೆಯು '**ಪ್ರೊಗ್ರೆಸ್**' ಅಥವಾ '**ಉನ್ನತಿ**' ಎಂಬ ಶಬ್ದಗಳಿಂದ ಬಣ್ಣಿಸಲ್ಪಡುತ್ತಿದ್ದಿತು. ಆಗ ನನಗೆ ಈ ಶಬ್ದಕ್ಕೆ ಏನೋ ಒಂದು ಅರ್ಥವಿದೆ ಎಂದು ತೋರುತ್ತಿದ್ದಿತು. 'ನಾನು ಹೇಗೆ ಬದುಕಿದರೆ ಒಳ್ಳೇದು?' ಎಂಬ ಪ್ರಶ್ನವು ಆಗ ಇನ್ನೂ ನನಗೆ ಪೀಡೆ ಕೊಟ್ಟಿರಲಿಲ್ಲ. 'ಬೆಳವಣಿಗೆಗೆ ಸಾನುಕೂಲವಾಗಿ ಬಾಳುವುದು' ಎಂಬ ಉತ್ತರವು ನನ್ನಲ್ಲಿದ್ದಿತು. ಆದರೆ ಈ ಉತ್ತರವು ಎಂಥಹದೆಂದರೆ ಒಬ್ಬನು ಒಂದು ನೌಕೆಯಲ್ಲಿ ಕುಳಿತು ಚಲ್ಲಾಟವಾಡುತ್ತ ಗಾಳಿ ಓಡಿಸಿದ ಕಡೆಗೆ, ತೆರೆಗಳು ಸೆಳೆದ ಕಡೆಗೆ ಸಾಗುತ್ತ 'ಯಾವ ಕಡೆಗೆ ನಡೆಸುವುದು?' ಎಂಬ ಪ್ರಶ್ನೆಗೆ 'ಯಾವಕಡೆಗೋ ಸಾಗಿಸಲ್ಪಡುತ್ತಲಿದ್ದೇನೆ' ಎಂದು ಹೇಳುತ್ತಲಿರುವವನ ಹಾಗೆ.

ಇದನ್ನು ಆಗ ನಾನು ಲಕ್ಷಿಸಿರಲಿಲ್ಲ. ಏನೋ ಒಮ್ಮೊಮ್ಮೆ ಈ ಕುರುಡು ನಂಬುಗೆಗೆ ವಿರೋಧವಾಗಿ ಏಳುತ್ತಿದ್ದೆನಾದರೂ ಅದು ಸ್ವಭಾವ ಪ್ರವೃತ್ತಿಯಿಂದಲೇ (Instinct) ಹೊರತು ಬುದ್ಧಿಯಿಂದಲ್ಲ. ನಮ್ಮ ಈಗಿನ ಕಾಲದಲ್ಲಿ ಹೀಗೆ ಇದು ರೂಢವೇ ಆಗಿದೆ; ಯಾಕಂದರೆ ಜನರು ಜೀವನದ ಬಗ್ಗೆ ತಮಗೆ ತಿಳುವಳಿಕೆ ಇಲ್ಲದಿರವುದನ್ನು ಇಂತಹವರ ಮರೆಯಲ್ಲಿಯೇ ಇರಿಸಿ, ತಮ್ಮದು ತಮಗೆ ಅದು ಗೊತ್ತಾಗಲಾರದಂತೆ ಮಾಡಿಕೊಳ್ಳುತ್ತಾರೆ................ಉದಾಹರಣೆಗಾಗಿ ಒಂದು ಮಾತನ್ನು ಹೇಳುವೆ – ನಾನು ಪ್ಯಾರೀಸಿನಲ್ಲಿದ್ದಾಗ, ಗಲ್ಲಿಗೇರಿಸುವ ಒಂದು ಪ್ರಸಂಗವನ್ನು ಕಣ್ಣಾರೆ ಕಂಡದ್ದರಿಂದ 'ಉನ್ನತಿ' [ 'ಪ್ರೋಗ್ರೆಸ್' ] ಎಂಬು

ದರ ಬಗೆಗೆ ನನಗಿದ್ದ ಮೂಢ ಶ್ರದ್ಧೆಯು ಎಷ್ಟು ಪೊಳ್ಳಾಗಿತ್ತೆಂಬುದು ಸ್ಪಷ್ಟವಾಯಿತು. ದಂಡದಿಂದ ರುಂಡವು ಬೇರೆಯಾದುದನ್ನು ಕಂಡೆ; ಪೆಟ್ಟಿಗೆಯಲ್ಲಿ ಅವೆರಡೂ ಬಿದ್ದ ಸಪ್ಪಳವನ್ನು ಕೇಳಿದೆ. ಆಗ ನನ್ನ ಬರೇ ಬುದ್ಧಿಗಷ್ಟೇ ಅಲ್ಲ, ಸರ್ವಾಂತಃಕರಣಕ್ಕೆ ಅನಿಸಿ ಬಿಟ್ಟಿದ್ದೇನೆಂದರೆ— ಜಗತ್ತು ಹುಟ್ಟಿದಂದಿನಿಂದ ಇಂದಿನವರೆಗೆ ಮಾನವರು ಅನಿಷ್ಟ ಸಿದ್ಧಾಂತಗಳಿಂದ ಈ ಕೃತಿಯು ಅಗತ್ಯವನ್ನು ಸಮರ್ಥಿಸಿಕೊಳ್ಳಲೇಕೆ; ಆದರೆ ಇದು ಅನವಶ್ಯಕವೆಂದೂ, ಕೆಟ್ಟದೆಂದೂ ನಾನು ತಿಳಿಯುತ್ತೇನೆ. ‘ಒಳ್ಳೆಯದು’ ಮತ್ತು ‘ಕೆಟ್ಟದು’ ಎಂಬವುಗಳ ಸ್ವರೂಪವು ಲೋಕಾಭಿಪ್ರಾಯ ಮತ್ತು ಲೋಕ ವರ್ತನಗಳ ಮೇಲೆ ಅವಲಂಬಿಸಿಲ್ಲ. ಉನ್ನತಿಯ ಬಗೆಗೂ ಕೂಡ ಹಿಗೆಯೇ. ನಾನು ಮತ್ತು ನನ್ನ ಹೃದಯ ಇದೇ ನನ್ನ ಪ್ರಮಾಣವೆಂದು ಭಾವಿಸಿದೆನು. ಉನ್ನತಿಯ ಬಗೆಗಿದ್ದ ಮೂಢ ಶ್ರದ್ಧೆಯು, ಜೀವನಕ್ಕೆ ಹೀಗೆ ಮಾರ್ಗದರ್ಶಕವಾಗಲಾರದೆಂಬ ಅನುಭವವು ನನಗೆ ಬರುವುದಕ್ಕೆ ನಡೆದ ಇನ್ನೊಂದು ಉದಾಹರಣೆಯೆಂದರೆ— ನನ್ನ ಅಣ್ಣನ ಮರಣ. ಆತನು ಜಾಣನೂ, ದಯಾಳುವೂ, ಗಂಭೀರನೂ ಆಗಿದ್ದನು. ಇನ್ನೂ ತರುಣನಿರುವಾಗಲೇ ಬೇನೆಬಿದ್ದು, ವರ್ಷಗಟ್ಟಲೆ ಕಷ್ಟಪಟ್ಟು ಕೊನೆಗೆ ವೇದನೆಯಿಂದ ಮಡಿದನು. ಬದುಕಿ ಇದ್ದದ್ದು ಏಕೆಯೆಂಬುದನ್ನಾಗಲೀ, ಈಗ ಸಾಯಬೇಕಾದುದು ಏಕೆ ಎಂಬುದನ್ನಾಗಲಿ ಆತನು ಅರಿತಿರಲಿಲ್ಲ. ಆತನ ಈ ವೇದನಾಯುಕ್ತ, ನಿಧಾನಗತಿಯ ಮರಣದ ದಿನಮಾನಗಳಲ್ಲಿ ಈ ಪ್ರಶ್ನೆಗಳಿಗೆ ಯಾವ ವಿಚಾರ ಸಿದ್ಧಾಂತವೂ, ನನಗಾಗಲೀ ಆತನಿಗಾಗಲೀ ಉತ್ತರವನ್ನು ನೀಡಲು ಸಮರ್ಥವಾಗಲಿಲ್ಲ. ಆದರೆ ನಾನು ಹೀಗೆ ಸಂದೇಹಪಟ್ಟ ಪ್ರಸಂಗಗಳು ಕೂಡ ತೀರ ವಿರಳವೆ. ಪ್ರತ್ಯಕ್ಷವಾಗಿ ಕೇವಲ ಉನ್ನತಿಯ ಬಗೆಗೆ ಮೊದಲಿಗೆ ನನಗಿದ್ದ ವಿಶ್ವಾಸವನ್ನು ಲೋಕದಿದುರಿಗೆ ಮಂಡಿಸುತ್ತಲಿರುವುದನ್ನು ಮುಂದುವರಿಸಿದೆನು. ‘ಎಲ್ಲವೂ ವಿಕಾಸಹೊಂದುತ್ತಲಿವೆ. ಮತ್ತು ನಾನೂ ವಿಕಾಸ ಹೊಂದುತ್ತಿದ್ದೇನೆ. ಎಲ್ಲದರೊಂದಿಗೆ ನನ್ನ ವಿಕಾಸವೂ ಏಕೆ ಆಗುತ್ತಿದೆಯೆಂಬುದು ಕೆಲದಿನಗಳಲ್ಲಿ ವಿದಿತವಾಗುವುದು.’ ಹೀಗೆ ನಾನು ಆ ಕಾಲದಲ್ಲಿ ನನ್ನ ಶ್ರದ್ಧೆಗೊಂದು ರೂಪವನ್ನು ಕೊಟ್ಟುಕೊಳ್ಳಬೇಕಾಗಿದ್ದಿತು.

ಪರದೇಶದಿಂದ ತಿರುಗಿಬಂದ ಮೇಲೆ ನನ್ನ ನಾಡಿನಲ್ಲಿಯೇ ನಾನು ಇರುತ್ತಿದ್ದೆನು. ಆಗ ಒಕ್ಕಲಿಗರ ಶಾಲೆಗಳನ್ನು ನನ್ನ ಕಡೆಗೆ ತೆಗೆದು ಕೊಳ್ಳುವ ಸುಸಂಧಿಯೊದಗಿತು. ಈ ಕಾರ್ಯವು ವಿಶೇಷವಾಗಿ ನನಗೆ ಸೇರುವಂತಹದಾಗಿದ್ದಿತು. ಯಾಕೆಂದರೆ ಸಾಹಿತ್ಯ ಮುಖದಿಂದ ಲೋಕ ಶಿಕ್ಷಣವನ್ನು ಕೊಡುವಾಗ ನಾನು ಎದುರಿಸಬೇಕಾಗಿದ್ದ ತೊಂದರೆಗಳು ಇವರಲ್ಲಿ ಒಂದೂ ಇರಲಿಲ್ಲ. ಇಲ್ಲಿಯೂ ನಾನು ಉನ್ನತಿಯ ಹೆಸರಿನಿಂದಲೇ ಕೆಲಸ ಮಾಡಿದೆನು. ಆದರೆ ಈ ಕಾಲದಲ್ಲಿ ಉನ್ನತಿ ಎಂಬುದನ್ನು ಪಿನು ಶಾಸ್ತ್ರೀಯ ದೃಷ್ಟಿಯಿಂದ ನೋಡುತ್ತಿದ್ದೆನು. ನನಗೆ ನಾನು ಹೇಳಿ ಕೊಂಡದ್ದೇನೆಂದರೆ– 'ಶಾಲೆಯಲ್ಲಿ ಉನ್ನತಿಯೆಂಬುದರ ಬೆಳವಣಿಗೆಯು ತಪ್ಪು ರೀತಿಯಿಂದ ಆದದ್ದುಂಟು. ಆದಿಮ ಸ್ಥಿತಿಯಲ್ಲಿರುವ ಒಕ್ಕಲಿಗರ ಮಕ್ಕಳೊಡನೆ ಸಂಪೂರ್ಣ ಸ್ವಾತಂತ್ರ್ಯದ ಭಾವನೆಯುಳ್ಳವನಾಗಿ, ಅವರ ಉನ್ನತಿಯಮಾರ್ಗವನ್ನು ಅವರೇ ಹುಡುಕಿ ಕೊಳ್ಳುವ ಹಾಗೆ ಇರಬೇಕು.' ಆದರೆ ವಾಸ್ತವಿಕವಾಗಿ ನಾನು ಯಾವಾಗಲೂ ಬಿಕ್ಕಟ್ಟಾದ ಒಂದೇ ಒಂದು ಸಮಸ್ಯದ ಮೇಲೆ ಸುತ್ತಾಡುತ್ತಿದ್ದೆನು ಅದೇನೆಂದರೆ 'ಏನು ಕಲಿಸುವದೆಂಬುದನ್ನು ಅರಿಯದೆ ಕಲಿಸುವದಾದರೂ ಹೇಗೆ? ಸಾಹಿತ್ಯ ಕ್ಷೇತ್ರದಲ್ಲಿದ್ದಾಗ ತಾನರಿಯದೆಯೂ ಮುಂದಿಗೆ ಬೋಧಿಸಬಹುದೆಂಬ ಅನುಭವವಿದ್ದಿತು ನನಗೆ. ಆದರೆ ಇಲ್ಲ ಆ ವಿಚಾರವು [illegible]. ಮುಂದಿಗೆ ಬೋಧಿಸಬೇಕೆಂಬ ನನ್ನ ವಾಸನೆಯನ್ನು ತೃಪ್ತಿಗೊಳಿಸುವದಕ್ಕಾಗಿ ನಾನೆಷ್ಟು ಕಷ್ಟಪಟ್ಟೆನೆಂಬುದನ್ನು ಸ್ಮರಿಸಿದರೆ ನನಗೀಗ ನಗೆ ಬರುತ್ತದೆ. ಯಾಕೆಂದರೆ ಪ್ರಯೋಜನ ಪರಿಣಾಮವೊಂದನ್ನು ನಾನು ಬೋಧಿಸಲಾರೆನೆಂಬುದು ನನಗೆ ಗೊತ್ತಿದ್ದಿತು. ಹೇಗೆಂದರೆ, ಯಾವುದು ಪ್ರಯೋಜನಕರವೋ ಅದೇ ನನಗೆ ಗೊತ್ತಿರಲಿಲ್ಲ. ಹೀಗೆ ಶಾಲೆಯ ಕಾರ್ಯದಲ್ಲಿ ಒಂದು ವರುಷ ಕಳೆದಮೇಲೆ 'ನನಗೆ ಗೊತ್ತಿಲ್ಲದೆಯೂ ಇನ್ನೊಬ್ಬರಿಗೆ ಹೇಗೆ ಕಲಿಸಿ ಕೊಡಬೇಕೆಂಬುದನ್ನು ಕಂಡು ಹಿಡಿಯುವದಕ್ಕಾಗಿ ಪುನಃ ಪರದೇಶ ಗಮನ ಮಾಡಿದೆನು.

ತಿಳಿಕೊಳ್ಳುವದನ್ನೆಲ್ಲ ತಿಳಿದುಕೊಂಡು ೧೮೬೧ ರಲ್ಲಿ ಸ್ವದೇಶಕ್ಕೆ ಮರುಳಿ ಬಂದೆ. ಬಂದೊಡನೇ (ಒಕ್ಕಲಿಗರಿಗೂ ಸಾವುಕಾರರಿಗೂ 'ರಾಜಿ' ಮಾಡಿಸುವ) ಮಾಜಿಸ್ಟ್ರೇಟನಾದೆನು ಹಾಗೆಯೇ ಶಿಕ್ಷಣ ಕಾರ್ಯವನ್ನು ಆರಂಭಿಸಿದೆನು. ಅಶಿಕ್ಷಿತರಾದ ಒಕ್ಕಲಿಗರಿಗೆ ಶಾಲೆಗಳ ಮುಖಾಂತರ ವಾಗಿಯೂ, ಸುಶಿಕ್ಷಿತ ವರ್ಗಕ್ಕೆ ನಾನೇ ಪ್ರಕಟಿಸಿದ ನಿಯತ ಕಾಲಿಕದ ಮೂಲಕವಾಗಿಯೂ ಶಿಕ್ಷಣವನ್ನು ಕೊಡಹತ್ತಿದೆ. ಕಾರ್ಯವೇನೋ ಚೆನ್ನಾಗಿ ನಡೆಯುವ ಹಾಗೆ ತೋರಿತು. ಆದರೆ ನನ್ನ ಬುದ್ಧಿಯು ಮಾತ್ರ ಸಮಾಧಾನ ಸ್ಥಿತಿಯಲ್ಲಿಲ್ಲವೆಂದೂ, ಅದು ಇನ್ನು ಬಹಳ ದಿನ ಆ ಹಾದಿಯಲ್ಲಿ ಮುಂದುವರಿಯಲಾರದೆಂದೂ ನನಗೆ ಅನಿಸಹತ್ತಿತು. ಅದೇ ಹೊತ್ತಿಗೆ ಅದುವರಿಗೂ ನಾನರಿಯದ ಸುಖಮಯ ಜೀವನದ ಇನ್ನೊಂದು ಮಗ್ಗುಲನ್ನು ನನಗೆ ತೋರಿಸಿದ ಲಗ್ನವೆಂಬುದು ಆಗಿರದಿದ್ದರೆ, ಮುಂದೆ ಹದಿನೈದು ವರ್ಷಗಳವೇಲೆ ಬರಲಿಕ್ಕಿದ್ದ ನಿರಾಶಾಜನಕ ಸ್ಥಿತಿಯು ನನಗೆ ಆವಾಗಲೇ ಬರಬಹುದಾಗಿದ್ದಿತು.

ಒಂದು ವರುಷದವರೆಗೆ ನಾನು ಆ ಮ್ಯಾಜಿಸ್ಟ್ರೇಟನ ಕೆಲಸ, ಶಾಲೆಗಳು ಮತ್ತು ನಿಯತ ಕಾಲಿಕ ಪತ್ರಿಕೆ ಇವೆಲ್ಲವುಗಳ ಸಲುವಾಗಿ ಕೆಲಸ ಮಾಡಿದೆನು. ಆಗ ನನಗೆ ನನ್ನ ವಿಚಾರಗಳ ಗಲಬಿಲಿಯ ಮೂಲಕ ಬಹಳ ಬಳಲಿಕೆಯುಂಟಾಯಿತು. ಯಾಕೆಂದರೆ ಮ್ಯಾಜಿಸ್ಟ್ರೇಟನ ಕೆಲಸವು ಬಹಳ ಬಿಗಿಯಾದದ್ದೂ, ಶಾಲೆಗಳ ಫಲಿತಾರ್ಥವು ಅಂಧಕಾರಮಯವಾದದ್ದೂ, ಪತ್ರಿಕೋದ್ಯಮದ ಎಳೆದಾಟವು ಅಸಹ್ಯವಾದದ್ದೂ, (ಏನು ಕಲಿಸಬೇಕಾಗಿದೆಯೆಂಬುವದನ್ನು ಸ್ವತಃ ತಾನರಿಯದಿದ್ದರೂ ಅದನ್ನು ಬಚ್ಚಿಟ್ಟು ತಿರುಗಿ ಮಂದಿಗೆ ಬೋಧಿಸಬೇಕಾಗಿದ್ದುದರಿಂದ) ಆಗಿದ್ದವು. ಆದುದರಿಂದ ನಾನು ಬೇನೆ ಬಿದ್ದೆನು. ಅದು ಹೆಚ್ಚಾಗಿ ದೈಹಿಕಕ್ಕಿಂತ ಮಾನಸಿಕವಾಗಿದ್ದಿತು. ಆಗ ಎಲ್ಲವನ್ನೂ ಬಿಟ್ಟುಕೊಟ್ಟು (ಏಸಿಯಾ, ಯುರೋಪುಗಳ) ತಪ್ಪಲು ಪ್ರದೇಶದ ಅಡವಿಗೆ ಶುದ್ಧವಾದ ಹವೆ, ಶುದ್ಧವಾದ ಆಹಾರ ವಿಹಾರ ಇವುಗಳನ್ನಪೇಕ್ಷಿಸಿ ಕೇವಲ ಪಶು ಪಕ್ಷಿಗಳಂತೆ ಜೀವನ ಸಾಗಿಸುವದಕ್ಕೆಂದು ಹೊರಟು ಹೋದೆನು.

ಅಲ್ಲಿಂದ ಹಿಂದಿರುಗಿದ ಮೇಲೆ ನನ್ನ ಲಗ್ನವಾಯಿತು. ಸುಖೀ ಕೌಟುಂಬಿಕ ಜೀವನದ ಹೊಸ ಅವಸ್ಥೆಯು ನನ್ನನ್ನು ಸಂಪೂರ್ಣವಾಗಿ ಜೀವನ ತತ್ವಾನ್ವೇಷಣದಿಂದ ಹಿಂದಕ್ಕೆ ಹೊರಳಿಸಿ ಬಿಟ್ಟಿತು. ಆಗ ನನ್ನ ಸಮಸ್ತ ಜೀವನವು ನನ್ನ ಕುಟುಂಬ, ಹೆಂಡತಿ, ಮಕ್ಕಳು ಮತ್ತು ಉಪಜೀವನದ ಸಮೃದ್ಧಿ ಇವೆಲ್ಲವುಗಳ ಕಡೆಗೆ ಏಕ ಮುಖ ವಾಗಿ ಬಿಟ್ಟಿತು. ಎಲ್ಲಕ್ಕು ಮೊದಲಿಗೆ ನನ್ನ ಪರಿಪೂರ್ಣತೆಯನ್ನು ಮಾಡಿಕೊಳ್ಳಬೇಕೆಂದಿದ್ದ ನನ್ನ ವಿಚಾರವು ಮುಂದೆ ಸರ್ವ ಸಾಧಾರಣ ವೆಲ್ಲದರಲ್ಲಿಯೂ ಊರ್ಜಿತಾವಸ್ಥೆಗೆ ಹೋಗಬೇಕೆಂಬುದಾಗಿ ಪರಿಣಮಿ ಸಿದ್ದಿತಷ್ಟೆ? ಆದರೆ ಅದು ಈಗ ಮತ್ತೊಂದು ರೂಪವನ್ನು ಹೊಂದಿತು. ಅದೇನೆಂದರೆ— ನನ್ನ ಹಾಗೂ ನನ್ನ ಕೌಟುಂಬಿಕ ಸ್ಥಿತಿಯನ್ನು ಭದ್ರ ವಾಗಿ ಉಳಿಸಿಕೊಳ್ಳುವುದರ ಕಡೆಗೆ ನನ್ನ ಪ್ರಯತ್ನವು ಸಾಗಿತು.

ಹೀಗೆ ಮತ್ತೆ ಹದಿನೈದು ವರುಷಗಳು ಕಳೆದವು.

ಸತ್ಯವಾಗಿ ನನಗೆ ಲೇಖನ ಕಾರ್ಯವು ಮಹತ್ವವಿಲ್ಲದುದಾಗಿ ಕಂಡಿತು. ಆದರೂ ಆ ಹದಿನೈದು ವರುಷಗಳಲ್ಲಿ ಬರೆಯುವದನ್ನು ಸಾಗಿಸಿಯೇ ಇದ್ದೆನು. ಆ ಕಾಲದಲ್ಲಿ ಲೇಖನ ಕಾರ್ಯದ ವಿಮೋಹನವನ್ನು ಆ ಸ್ವಾದಿಸಿದ್ದೆನು. ನನ್ನ ಕ್ಷುಲಕ ಗ್ರಂಥಗಳಿಗೆ ಅಪಾರವಾದ ಮನ್ನಣೆಯೂ, ಧನಪ್ರಾಪ್ತಿಯೂ ಕಟ್ಟಿಟ್ಟಿದ್ದವು. ನನ್ನ ಭೌತಿಕ ಸ್ಥಿತಿಯನ್ನು ಸುಧಾ ರಿಸಿಕೊಳ್ಳುವುದಕ್ಕಾಗಿಯೂ ಜೀವನದ ಪ್ರಶ್ನೆಗಳನ್ನೆಲ್ಲ ಕಟ್ಟಿ ಹಾಕು ವುದಕ್ಕಾಗಿಯೂ ನಾನು ಇಂಥಹದಕ್ಕೆ ನನ್ನನ್ನು ಅರ್ಪಿಸಿದ್ದೆನು.

ನನಗೆ ಕೇವಲ ಸತ್ಯವೆಂದು ಆಗ ತೋರುತ್ತಿದ್ದ ನನ್ನ ಮಾತಿನ ಬಗೆಗೆ ಬರೆಯುವದನ್ನೂ ಬೋಧಿಸುವದನ್ನೂ ಮಾಡುತ್ತಿದ್ದೆನು. ಅಂಥ ಆ ಸತ್ಯವಾವುದೆಂದರೆ— ತನ್ನ ಹಾಗು ತನ್ನ ಕುಟುಂಬದ ಕಲ್ಯಾಣ ವನ್ನು ಸಾಧಿಸುವದಕ್ಕಾಗಿಯೇ ಮನುಷ್ಯನು ಬಾಳಿ ಬದುಕತಕ್ಕದ್ದು.

ಹೀಗೆ ನಾನು ಇರಹತ್ತಿದೆನು. ಆದರೆ ಐದು ವರುಷಗಳ ಪೂರ್ವ ದಲ್ಲಿ ನನ್ನೊಳಗೆ ಒಂದು ಅತಿ ವಿಲಕ್ಷಣವು ಸಂಭವಿಸುವದಕ್ಕೆ ಆರಂಭ

ನನ್ನ ಗ್ರಂಥಗಳಿಂದ ನನಗೆ ಬರುವ ಕೀರ್ತಿಯನ್ನು ಕುರಿತು ಲೆಕ್ಕ ಹಾಕು
ತ್ತಿರುವಾಗ "ಬಹಳ ಚೆನ್ನಾಗಿದೆ: ನೀನು ಗಾಗಲ್, ಪುಷ್ಕಿನ್, ಶೇಕ್ಸ್
ಪಿಯರ್ ಮತ್ತು ಮೋಲಿಯರ್ ಇವರೆಲ್ಲರಿಗಿಂತ— ಅಷ್ಟೇ ಏಕೆ, ಜಗತ್ತಿನ
ಸರ್ವ ಲೇಖಕರಿಗಿಂತ ನೀನು ವಿಖ್ಯಾತನಾಗುವಿಯೆಂದು ಇಟ್ಟುಕೊಂಡರೂ
ಅದರಿಂದ ಪ್ರಯೋಜನವೇನು ?" ಎಂಬ ಪ್ರಶ್ನವು ಬಂದೇ ತೀರುತ್ತಿ
ದ್ದಿತು. ಆದರೆ ಅದಕ್ಕೆ ಉತ್ತರಹೇಳಲು ನನಗೆ ಎಷ್ಟೂ ಶಕ್ಯವಾಗು
ತ್ತಿರಲಿಲ್ಲ. **ಪ್ರಶ್ನಗಳು ಉತ್ತರಕ್ಕಾಗಿ ದಾರಿಯನ್ನು ಕಾಯುತ್ತ ನಿಲ್ಲುತ್ತಿ
ರಲಿಲ್ಲ. ಅವುಗಳಿಗೆ ತತ್‌ಕ್ಷಣದಲ್ಲಿಯೇ ಉತ್ತರವನ್ನೀಯಬೇಕಾಗುತ್ತಿ
ದ್ದಿತು. ಆದರೆ ಅದು ನನಗೆ ಶಕ್ಯವಾಗದೆ ಹೋಗಲು, ಅದಡೊಡನೆ
ನಾನು ಬದುಕಿರುವುದೂ ನನಗೆ ಅಶಕ್ಯವಾಗುತ್ತಿದ್ದಿತು. ಆದರೇನು ?
ಉತ್ತರವಂತೂ ಇಲ್ಲವೇ ಇಲ್ಲ.**

ಹೀಗೆ ನನ್ನ ಕಾಲಕೆಳಗಿನ ಆಧಾರವು ಕುಸಿದು ಹೋದುದಾಗಿ ನನ್ನ
ಅನುಭವಕ್ಕೆ ಬಂದಿತು ...........

# ೪. ಪ್ರಾಣಕ್ಕೆ ಬೇಸರ.

ನನ್ನ ಜೀವನವು ನಿಂತುಬಿಡುವುದಕ್ಕೆ ಬಂದಿತು. ನಾನೇನೋ ಉಸುರಾಡಿಸುತ್ತಿದ್ದೆ; ಉಣ್ಣುತ್ತಿದ್ದೆ; ತಿನ್ನುತ್ತಿದ್ದೆ; ಆದರೆ ಜೀವನವೆಂಬುದೇ ಇರಲಿಲ್ಲ. ಯಾಕೆಂದರೆ, ಯಾವ ಆಕಾಂಕ್ಷೆಗಳ ಸಾಫಲ್ಯವೂ ನನಗೆ ಸಾರ್ಥಕವೆನಿಸದಂತಾಯಿತು. ನಾನು ಏನನ್ನಾದರೂ ಅಪೇಕ್ಷಿಸಿದೊಡನೆ ಅದು ಸಾಧಿಸಲಿ ಸಾಧಿಸದಿರಲಿ— ಅದರಿಂದ ನನಗೇನು ಫಲ? ಎಂಬ ಪ್ರಶ್ನವು ಕಣ್ಣ ಮುಂದೆ ಕಟ್ಟುತ್ತಿದ್ದಿತು. ಯಾವಳಾದರೊಬ್ಬ ಯಕ್ಷಿಣಿಯು ಬಂದು ನನ್ನ ಆಕಾಂಕ್ಷೆಗಳನ್ನು ಪೂರೈಸುವದಕ್ಕೆ ನಿಂತರೆ, ಆಗ ಅವಳಿಗೆ ಏನು ಬೇಡಬೇಕೆಂಬುದು ಕೂಡ ನನಗೆ ತಿಳಿಯದಂತಾಗಿದ್ದಿತು. ಏನೋ ಒಮ್ಮೊಮ್ಮೆ ಆವೇಶದ ಕ್ಷಣಗಳು ಬಂದಾಗ, ಆಶೆಯಲ್ಲದಿದ್ದರೂ ಆಶೆಯಂತಹದೇನೋ ಒಂದಿಷ್ಟು ಸುಳಿಯುತ್ತಿದ್ದಿತು. ಆದರೆ ಆವೇಶವಿಳಿದಾಗ ಇವೆಲ್ಲಾ ಭ್ರಮೆಯೆಂದೂ, ನಿಜವಾಗಿ ಅನಿಸತಕ್ಕುದೇನೂ ಇಲ್ಲವೇ ಇಲ್ಲವೆಂದೂ ತೋರುತ್ತಿದ್ದಿತು. ಇಷ್ಟೇ ಅಲ್ಲ, ನಿಜವನ್ನು ಅರಿಯುವದಕ್ಕೂ ಕೂಡ ಆಶಿಸದಂತಾದೆನು. ಯಾಕೆಂದರೆ ಅದರಲ್ಲೇನಿದೆಯೆಂಬುದನ್ನು ನಾನು ಮೊದಲೇ ಊಹಿಸಿದ್ದೆನು. ಆ ನೈಜವೇನಿದ್ದಿತೆಂದರೆ, ಜೀವನವೆಂಬುದು ಅರ್ಥವಿಲ್ಲದ ಒಂದು ವಸ್ತುವಾಗಿದೆ; ಇಷ್ಟೇ. ನನ್ನಿದಿರಿಗೆ ಸರ್ವನಾಶವಲ್ಲದೆ ಇನ್ನೇನೂ ಕಾಣಿಸಿದ ಕಮರಿಯ ಕೊಳ್ಳಕ್ಕೆ ಬಂದು ಮುಟ್ಟಿದೆನು. ನಡೆಯುವದನ್ನು ತಡೆಯುವದಕ್ಕೂ ಶಕ್ಯವಿರಲಿಲ್ಲ. ಹೊರಳಿ ಹಿಂಪಕ್ಕೆ ಹೋಗುವದಕ್ಕೂ ಶಕ್ಯವಿರಲಿಲ್ಲ. ಇಷ್ಟೇ ಅಲ್ಲ, ನನ್ನ ಇದುರಿಗಿದ್ದ ಕಷ್ಟಾನುಭವ, ವಾಸ್ತವಿಕ ಮೃತ್ಯು, ಸಂಪೂರ್ಣ ಲಯ ಇವುಗಳನ್ನು ನೋಡದಂತೆ ನನ್ನ ಕಣ್ಣುಗಳನ್ನು ಮುಚ್ಚಿಕೊಳ್ಳುವುದಕ್ಕೂ ನನಗೆ ಶಕ್ಯವಿರಲಿಲ್ಲ.

ನಾನು ಆರೋಗ್ಯಶಾಲಿಯೂ, ಸುಪ್ರೈವಿಯೂ ಆಗಿದ್ದರೂ ಕೂಡ ಇನ್ನು ಬಹುಕಾಲ ಬದುಕಿ ಉಳಿಯುವದು ಕಠಿಣವೆಂದು ನನಗೆ ಅನಿಸಿ

ಹತ್ತಿತು. ಯಾವದೋ ಅದಮನೀಯ ಶಕ್ತಿಯೊಂದು ನನ್ನನ್ನು ಜೀವನ ಪಥದಿಂದ ದೂರಕ್ಕೆ ಓಡಿಸುತ್ತಿತ್ತು. ಆಗ ನನ್ನನ್ನು ನಾನು ಕೊಂದು ಕೊಳ್ಳುವುದಕ್ಕೆ ನಾನಾಗಿ ಇಚ್ಛಿಸಿದೆನೆಂದು ಹೇಳಲಾರೆನು. ಯಾಕೆಂದರೆ, ಜೀವನದಿಂದ ನನ್ನನ್ನು ದೂರಕ್ಕೆ ಓಡಿಸುತ್ತಿದ್ದ ಶಕ್ತಿಯು ನನ್ನ ಅಭಿಲಾಷೆಗಿಂತ ಬಲವಾದದ್ದೂ, ಪರಿಪೂರ್ಣವಾದದ್ದೂ, ವಿಶಾಲವಾದ್ದೂ ಆಗಿದ್ದಿತು. ಹಿಂದೆ, ಬದುಕಿರುವ ಪ್ರಯತ್ನವನ್ನು ಮಾಡಿಸುತ್ತಿದ್ದ ಶಕ್ತಿಯಷ್ಟೇ ಪ್ರಬಲವಾಗಿ, ಇದು ಅದರ ವಿರುದ್ಧ ದಿಶೆಗೆ ಓಡಿಸುತ್ತಿದ್ದಿತು. ನನ್ನ ಸರ್ವ ಶಕ್ತಿಯೆಲ್ಲ ಜೀವನದಿಂದ ನನ್ನನ್ನು ದೂರಕ್ಕೆ ಎಳೆಯುತ್ತಿದ್ದಿತು. ಹಿಂದೆ ನನ್ನ ಬಾಳುವೆಯನ್ನು ಸುಧಾರಿಸಿಕೊಳ್ಳುವುದರ ಸಲುವಾಗಿ ಆಲೋಚಿಸುವದು ಎಷ್ಟು ನನಗೆ ಸ್ವಾಭಾವಿಕವಾಗಿದ್ದಿತೋ ಈಗ ಆತ್ಮನಾಶವನ್ನು ಮಾಡಿಕೊಳ್ಳುವ ಆಲೋಚನೆಯು ಕೂಡ ಅಷ್ಟೇ ಸ್ವಾಭಾವಿಕವಾಗಿ ಬಿಟ್ಟಿದ್ದಿತು. ಆದರೆ ಬದುಕಿರುವ ಮರಳೂ ನನಗೆ ಅಷ್ಟೇ ಇದ್ದಿತು. ಇಲ್ಲದಿದ್ದರೆ ಆದರ ವಿಪರೀತ ಪ್ರಯತ್ನಕ್ಕೆ ಅವಸರ ಪಡಬಹುದಾಗಿದ್ದಿತು. ನಾನು ಹಾಗೆ ಅವಸರ ಪಡುವುದಕ್ಕೆ ಅಪೇಕ್ಷಿಸಲಿಲ್ಲ. ಪ್ರಸ್ತುತ ವಿಷಯದ ತೊಡಕು ಬಿಚ್ಚುವುದಕ್ಕೆ ಸರ್ವ ಪ್ರಯತ್ನಗಳನ್ನೂ ಪ್ರಯೋಗಿಸಲು ನಾನು ಆಶೆಪಟ್ಟೆನು. 'ಈ ವಿಷಯದ ತೊಡಕು ನನಗೆ ಬಿಚ್ಚದೇ ಹೋದರೆ ಆ ಮೇಲೆ ಕಾಲವೆಂಬುದು ಇದ್ದೇ ಇರುವುದಲ್ಲಾ.' ಎಂದುಕೊಂಡನು. ಆದರೂ ನಾನು ನನ್ನ ಕೋಣೆಯಲ್ಲಿ ಒಂದು ಹಗ್ಗದ ತುಣುಕನ್ನು ಕೂಡ ಇರಗೊಡುತ್ತಿರಲಿಲ್ಲ. ಯಾಕೆಂದರೆ, ನಾನು ಅದರ ಸಹಾಯದಿಂದ ಉರಲು ಹಾಕಿಕೊಂಡು ಸಾಯಬಹುದಾಗಿದ್ದಿತು. ಅಲ್ಲದೆ, ನಾನು ತುಬಾಕಿಯನ್ನು ತಗೆದುಕೊಂಡು ಬೇಟೆಗೆ ಹೋಗುವುದನ್ನು ಬಿಟ್ಟೆನು. ಯಾಕೆಂದರೆ, ಅದರಿಂದ ಸುಲಭವಾಗಿ ನನ್ನ ಪ್ರಾಣವನ್ನು ಕಳೆದುಕೊಳ್ಳುವುದಕ್ಕೆ ನನಗೆ ಆಶೆಹುಟ್ಟಬಹುದಾಗಿದ್ದಿತು. ನನಗೇನು ಬೇಕೆಂಬುದು ನನಗೆ ತಿಳಿಯದಂತಾಗಿದ್ದಿತು. ನಾನು ಜೀವನಕ್ಕೆ ಹೆದರಿದ್ದೆನು. ಆದುದರಿಂದ ನಾನು ಅದರ ಕೈಯೊಳಗಿಂದ ಪಾರಾಗಲು ಇಚ್ಛಿಸುತ್ತಿದ್ದೆನು ಆದರೂ ಅಂಥದರಲ್ಲೇ ನಾನು ಅದರಿಂದ ಏನೋ ಪಡೆಯುವದರ ಭರವಸೆಯನ್ನು ಇಟ್ಟುಕೊಂಡಿದ್ದೆನು.

ಆ ಕಾಲಕ್ಕೆ ನನ್ನ ಜೀವನದಲ್ಲಿ ಎಲ್ಲಾ ಪರಿಸ್ಥಿತಿಗಳು ಸುದೈವ ಪೂರಿತವಾಗಿಯೇ ಇದ್ದವು. ನನ್ನ ವಯಸ್ಸು ಐವತ್ತು ಕೂಡ ಇನ್ನೂ ಆಗಿರಲಿಲ್ಲ. ನನ್ನ ಹೆಂಡತಿಯು ಬಹಳೇ ಒಳ್ಳೇಯವಳಾಗಿದ್ದಳು ನನ್ನನ್ನು ಅವಳು, ಅವಳನ್ನು ನಾನು ಪರಸ್ಪರ ಪ್ರೀತಿಸುತ್ತಿ-ದ್ದೆವು. ಅಲ್ಲದೆ ಒಳ್ಳೇಯ ಮಕ್ಕಳಿದ್ದರು. ಮೇಲಾಗಿ ನನಗೆ ದೊಡ್ಡ ಆಸ್ತಿಯಿದ್ದಿತು. ಯಾವ ಕಷ್ಟವು ಇಲ್ಲದೆ ಅದು ಬೆಳೆಯುವ ಸ್ಥಿತಿಯಲ್ಲಿದ್ದಿತು. ಹಿಂದಿನದಕಿಂತ ಈಗ ಹೆಚ್ಚಾಗಿ ನಾನು ನನ್ನ ಬಳಗದವರ ಹಾಗೂ ಜೊತೆಯವರ ಮನ್ನಣೆಗೆ ಪಾತ್ರನಾಗಿದ್ದೆನು. ಅನ್ಯರೂ ನನ್ನನ್ನು ಹೊಗಳುತ್ತಿದ್ದರು. ನನ್ನ ಕೀರ್ತಿಯು ನಿರಾಯಾಸವಾಗಿ ಬೆಳೆಯುತ್ತಿದ್ದಿತು. ನನ್ನ ಮಾನಸಿಕ ಸ್ಥಿತಿಯು ಹುಚ್ಚುತನ ಹಾಗೂ ವಿಕೃತಿಗಳಿಂದ ದೂರವಲ್ಲಿದ್ದಿತು. ತಿರುಗಿ ಕೇಳಿದರೆ ಅದಕ್ಕೆ ಪ್ರತಿಯಾಗಿ ನನಗಿದ್ದಂಥ ಮೇಧಾ ಶಕ್ತಿಯನ್ನೂ ದೇಹಸ್ಥಿತಿಯನ್ನೂ ನನ್ನ ವರ್ಗದ ಜನರಲ್ಲಿ ಅಪರೂಪವಾಗಿ ಕಾಣಬಹುದಾಗಿದ್ದಿತು. ದೈಹಿಕ ರೀತಿಯಿಂದ ನೋಡಿದರೆ ನಾನು ಒಕ್ಕಲಿಗರೊಡನೆ ಕೆಲಸ ಬೊಗಸೆ ಮಾಡುತ್ತಿದ್ದೆನು. ಮಾನಸಿಕ ರೀತಿಯಿಂದ ನೋಡಿದರೆ ಎಂಟ್ಹತ್ತು ತಾಸುಗಳವರೆಗೆ ಯಾವ ಬಳಲಿಕೆಯೂ ಇಲ್ಲದೆ ಬೌದ್ಧಿಕ ಪರಿಶ್ರಮವನ್ನು ಮಾಡುವವನಾಗಿದ್ದೆನು. ಹೀಗೆಲ್ಲ ಇದ್ದೂ ಕೂಡ ನಾನು ನನ್ನ ಪ್ರಾಣವನ್ನು ಕಳೆದು ಕೊಳ್ಳುವುದಕ್ಕೆ ಪ್ರಯತ್ನಿಸುವ ಸ್ಥಿತಿಗೆ ಬಂದೆನು.

ನನ್ನ ಇಂಥ ಮನಸ್ಥಿತಿಯಲ್ಲಿ ನನಗೆ ಅನಿಸಹತ್ತಿದ್ದೇನಂದರೆ— ಯಾವನೋ ಒಬ್ಬನು ನನ್ನ ಜೀವನದೊಡನೆ ಹಿಡಿಗೇಡಿತನದಿಂದಲೂ ಮತ್ಸರದಿಂದಲೂ ಕುಚೇಷ್ಟೆಯನ್ನು ನಡಿಸಿದ್ದಾನೆ. ಆದರೂ ನನ್ನನ್ನು ಸೃಷ್ಟಿಸಿದ, ‘ಯಾವನೋ ಒಬ್ಬ’ ನನ್ನು ಕುರಿತು ನಾನು ಏನೂ ಆಡಲಾರದವನಾಗಿದ್ದೆನು. ಆದರೂ ನನ್ನ ಜೀವನದ ಇಂಥ ಸ್ಥಿತಿಯು ನನಗೆ ಅಂಥವನೊಬ್ಬನನ್ನು ಕುರಿತು ತೀರ ಸಹಜವಾಗಿ ಸೂಚಕವನ್ನು ತೋರಿಸುತ್ತಿದ್ದಿತು.

**ಅನೈಚ್ಛಿಕವಾಗಿಯೂ ಕೂಡ ನನಗೆ ತೋರಹತ್ತಿದ್ದೇನೆಂದರೆ— 'ಯಾವನೋ ಒಬ್ಬನು' ನನ್ನನ್ನು ನೋಡಿ ತನ್ನ ಮನರಂಜನವನ್ನು ಮಾಡಿಕೊಳ್ಳುತ್ತಿರಲಿಕ್ಕೇಬೇಕು.** ನಾನು ಮೂವತ್ತು ನಾಲ್ವತ್ತು ವರುಷಗಳಿಂದ ನನ್ನ ದೇಹ ಮತ್ತು ಬುದ್ಧಿ ಇವುಗಳನ್ನು ವಿವಿಧ ಸಾಧನಗಳಿಂದ ಸುಪುಷ್ಟ ಸ್ಥಿತಿಗೆ ತಂದುಕೊಳ್ಳುತ್ತ, ನಾನದರ ಶಿಖರದ ತುಟ್ಟ ತುದಿಗೆ ಬಂದು ನಿಂತಾಗ ನನಗೆ ಜೀವನವೆಂಬುದೆಲ್ಲಾ ಎಂದೆಂದಿಗೂ ವ್ಯರ್ಥವಾಗಿ ತೋರಹತ್ತಿದ್ದನ್ನು ನೋಡಿ ಆತನಿಗೆ ರಂಜನವಾಗದೇ ಇದ್ದೀತೇ?

ಆದರೆ ನನ್ನನ್ನು ನೋಡಿ ನಗುತ್ತಾ ಇದ್ದ ಆ **'ಯಾವನೋ ಒಬ್ಬನು'** ಇದ್ದಿರಬಹುದೋ ಇರಲಿಕ್ಕಿಲ್ಲವೋ ಆ ಮಾತು ಒತ್ತಟ್ಟಿಗೆ ಉಳಿದರೂ— ನಾನಾಗ ಒಳ್ಳೇ ಸ್ಥಿತಿಯಲ್ಲಿರಲಿಲ್ಲವೆಂಬುದಾದರೂ ತುಂಬಾ ಸತ್ಯವಾಗಿದ್ದಿತು. **ನನ್ನ ಬಿಡಿ ಕೃತಿಗಳಿಗಾಗಲೀ ಇಡಿ ಜೀವನಕ್ಕಾಗಲೀ ಸಯುಕ್ತಿಕವಾದ ಅರ್ಥವನ್ನು ಹೇಳಿಕೊಡುವುದಕ್ಕೆ ಆಗಲಾರದವನಾಗಿದ್ದೆನು............**

ಪೂರ್ವದೇಶವಲ್ಲಿ ಪುರಾತನ ಕಾಲದಿಂದ ಹೇಳುತ್ತ ಬಂದ ಒಂದು ಕಥೆಯಿದೆ. ಒಂದು ತಪ್ಪಲು ಭೂಮಿಯಲ್ಲಿ ಒಬ್ಬ ದಾರಿಕಾರನ ಮೇಲೆ ಒಂದು ಕ್ರೂರ ಮೃಗವು ಎರಗಿಬಂದಿತು. ಆತನು ತನ್ನ ಜೀವವುಳಿಸಿಕೊಳ್ಳಬೇಕೆಂದು ಒಂದು ಹಾಳು ಭಾವಿಯಲ್ಲಿ ಹಾರಿಕೊಂಡನು. ಆದರೆ ಆ ಭಾವಿಯ ತಳದಲ್ಲಿ ಈತನನ್ನು ನುಂಗುವದಕ್ಕೆಂದು ಬಾಯಿತೆರೆದ ಘಟಸರ್ಪವೊಂದನ್ನು ಕಂಡನು. ಆಗ ದುರ್ದೈವಿಯಾದ ದಾರಿಕಾರನಿಗೆ ಮೇಲೆ ಏರುವದಕ್ಕೂ, ಕೆಳಗೆ ಜಿಗಿಯುವದಕ್ಕೂ, ಹೀಗೆ ಎರಡಕ್ಕೂ ಧೈರ್ಯ ಸಾಲದಂತಾಗಲು ಆತನು ಆ ಬಾವಿಯ ಗೋಡೆಯ ಬಿರುಕಿನಲ್ಲಿ ಬೆಳೆದ ಗಿಡಬಳ್ಳಿಯೊಂದನ್ನು ಹಿಡಿದುಕೊಂಡನು. ಒಂದೇ ಸವನೆ ಕೈಗಳು ನೋಯಹತ್ತಿದ್ದರೂ, ಕೆಳಗೂ ಮೇಲೂ ಕೂಡಿಯೇ ಹೊಂಚು ಹಾಕಿಕೊಂಡು ಕುಳಿತ ಸರ್ವನಾಶಕ್ಕೆ ಹೆದರಿ ಆತನು ಆ ಕಂಟಿಯನ್ನು ಹಾಗೆಯೇ ಗಟ್ಟಿಯಾಗಿ ಹಿಡಿದುಕೊಂಡನು. ಆಗ ಅವನಿಗೆ ಕಂಡಿದ್ದೆಂ

ಸಂದರೆ— ಒಂದರಹಿಂದೊಂದು ಕ್ರಮದಿಂದ ಸುತ್ತಾಡುವ ಬಿಳಿಯ ಹಾಗು ಕರಿಯ ಎರಡು ಇಲಿಗಳು ಆ ಟೊಂಗೆಯನ್ನು ಕತ್ತರಿಸುತ್ತಿದ್ದವು. ಸ್ವಲ್ಪ ಹೊತ್ತಿನಲ್ಲಿಯೇ ಆ ರಂಬೆಯು ಕೆಳಗಿರುವ ಘಟಸರ್ಪದಮೇಲೆ ಬೀಳತಕ್ಕದ್ದು ದಾರಿಕಾರನು ತನ್ನನ್ನು ಉಯುವ ಅನಿವಾರ್ಯವೆಂದು ತಿಳಿದನು. ಸುತ್ತು ಮುತ್ತು ನೋಡುತ್ತಿದ್ದ ಆತನಿಗೆ ಅಂತಹದರಲ್ಲಿಯೇ ಅಲ್ಲಿ ಎಲೆಗಳಮೇಲೆ ಜೇನಿನ ಹನಿಗಳು ಬಿದ್ದಿರುವುದಾಗಿ ಕಾಣಲು, ಆವನು ನಾಲಿಗೆಯನ್ನು ಚಾಚಿ ಅವನ್ನು ನೆಕ್ಕಹತ್ತಿದನು. ನಾನೂ ಕೂಡ ಜೀವನವೆಂಬ ರಂಬೆಗೆ ಜೋತು ಬಿದ್ದದ್ದು ಹೀಗೆಯೇ. ಮರಣವೆಂಬ ಘಟಸರ್ಪವು ಅನಿವಾರ್ಯವಾಗಿ ನನ್ನನ್ನು ಛಿನ್ನಛಿನ್ನ ಮಾಡುವದಕ್ಕೆ ಸಿದ್ಧವಾಗಿ ಕುಳಿತಿರುವುದನ್ನು ನಾನರಿತಿದ್ದೇನು. ಆದರೆ ಇಂಥ ಯಾತನೆಯಲ್ಲಿ ನಾನು ಪುಳಿಬೀಳಾಗಿದ್ದದ್ದರ ಅರ್ಥವನ್ನು ನಾನು ಅರಿಯದವನಾಗಿದ್ದೆನು. **ಯಾವುದು ನನಗೆ ಮೊದಲು ಸಮಾಧಾನವನ್ನು ಕೊಡುತ್ತಿದ್ದಿತೋ ಅಂಥ ಜೇನನ್ನು ನೆಕ್ಕುವದಕ್ಕೆ ನಾನು ಯತ್ನಿಸಿದೆನು. ಆದರೆ ಆ ಜೇನು ಬಹುಕಾಲ ನನಗೆ ಸಂತಸವನ್ನು ಬೀರದಂತಾಯಿತು.** ಹಗಲಿರುಳುಗಳೆಂಬ ಇಲಿಗಳು ನನ್ನ ಆಶ್ರಯದ ಟೊಂಗೆಯನ್ನು ಕತ್ತರಿಸ ತೊಡಗಿದವು. ಘಟಸರ್ಪವನ್ನು ಸ್ಪಷ್ಟವಾಗಿ ನಾನು ಕಂಡಬಳಿಕ ನನಗೆ ಜೇನಿನಲ್ಲಿ ಸವಿಯುಳಿಯಲಿಲ್ಲ. ನನಗೆ ತಪ್ಪಿಸಿಕೊಳ್ಳಲಿಕ್ಕೆ ಶಕ್ಯವಿಲ್ಲದ ಘಟಸರ್ಪ ಮತ್ತು ಇಲಿಗಳ ಮೇಲಿನ ನನ್ನ ದೃಷ್ಟಿಯನ್ನು ಕದಲಿಸುವುದಕ್ಕೆ ಆಗದೆ ಹೋಯಿತು. ಇದು ಒಂದು ಕಥೆಯಲ್ಲ; ಆದರೆ ಸಕಲರಿಗೂ ಸುಗಮವಾಗಿ ಉತ್ತರವನ್ನು ಹೇಳುವ ಪರಮ ಸತ್ಯವೇ ಆಗಿದೆ.

ಹಿಂದೆ ಘಟಸರ್ಪದ ಭಯವನ್ನು ಶಮನಗೊಳಿಸುತ್ತಿದ್ದ ಜೀವನದ ಪ್ರಮೋದಗಳು ಈಗ ನನ್ನನ್ನು ಆ ಪ್ರವಂಚನೆಯಲ್ಲಿ ನೂಕಲು ಅಸಮರ್ಥವಾದವು. ಮೊದಲು 'ಜೀವನದ ಅರ್ಥವನ್ನು ನೀನು ಅರಿಯಲಾರಿ. ಆದ್ದರಿಂದ ಆ ಬಗೆಗೆ ಆಲೋಚಿಸದೆ ಬಾಳಿ ಬದುಕು.' ಎಂದು ಮೇಲಿಂದ ಮೇಲೆ ಹೇಳಿಕೊಂಡಿರಲೊಲ್ಲನೇಕೆ, ಆದರೆ ಹಾಗೆ ಬಹು ಕಾಲ ನಡೆಯಲು ಶಕ್ಯವಾಗಲಿಲ್ಲ. ಹಗಲಿರುಳುಗಳು ಒಂದರಹಿಂದೊಂದು

ಸುತ್ತುತ್ತ, ನನ್ನನ್ನು ಮೃತ್ಯುಮುಖಕ್ಕೆ ತರುತ್ತಲಿರುವುದನ್ನು ಕಂಡ ನಂತರ ಆ ಬೋಧನೆಗೆ ನಿರತನಾಗುವುದು ಈಗ ನನಗೆ ಅಶಕ್ಯ. ನನಗೆ ಅದೊಂದೇ ಕೇವಲ ಸತ್ಯವಾಗಿ ತೋರಿ, ಉಳಿದುವೆಲ್ಲ ಅಸತ್ಯವಾಗಿ ಕಾಣತೊಡಗಿತು.

**ಕ್ರೂರ ಸತ್ಯವನ್ನು ನನ್ನ ಕಣ್ಣಿನಿಂದ ಮರೆ ಮಾಡಿದ ಜೇನಿನ ಎರಡು ಹನಿಗಳೆಂದರೆ— ನನ್ನ ಕೌಟಂಬಿಕ ಪ್ರೇಮ, ಮತ್ತು ನಾನು ಕಲೆಯೆಂದು ಕರೆಯುವ ಲೇಖನ. ಇವುಗಳಲ್ಲಿ ಬಹಳ ಕಾಲದವರೆಗೆ ನನಗೆ ಸ್ವಾದವು ಉಳಿಯಲಿಲ್ಲ.**

**'ಕುಟುಂಬ'........** ನನ್ನ ಹೆಂಡರು ಮಕ್ಕಳಾದರೂ ಮಾನವರೇ ಆಗಿದ್ದಾರೆ. ಅವರೂ ನನ್ನಂತೆಯೇ ಅಸತ್ಯದಲ್ಲಾದರೂ ಬಾಳಬೇಕು; ಅಥವಾ ಉಗ್ರ ಸತ್ಯವನ್ನಾದರೂ ಕಾಣಬೇಕು. ಅವರು ಯಾತಕ್ಕೆ ಬದುಕಿ ಇರಬೇಕು? ನಾನೇಕೆ ಅವರನ್ನು ಪ್ರೀತಿಸಿ ಜೋಪಾನ ಮಾಡಬೇಕು? ನಾನೀಗ ಅನುಭವಿಸುತ್ತಲಿರುವ ನಿರಾಶೆಗೆ ಅವರೂ ಒಂದು ದಿನ ಬಂದು ಮುಟ್ಟಬಹುದು. ಅವರನ್ನು ಪ್ರೀತಿಸುವದರಿಂದ ಸತ್ಯವನ್ನು ಅವರ ಕಣ್ಣಿಗೆ ಮರೆಮಾಡಲು ಆಗುವದಿಲ್ಲ. **ತಿಳುವಳಿಕೆಯಲ್ಲಿ ಅವರು ಹೆಜ್ಜೆಯಿಟ್ಟಹಾಗೆಲ್ಲಾ ನಿಜದೆಡೆಗೇ ಸಾಗುತ್ತಾರೆ. ಆ ನಿಜವಾದರೋ ಮರಣವೇ.**

**'ಕಲೆ ಮತ್ತು ಕಾವ್ಯ'** ........ ಗೆಲವು ಮತ್ತು ಮಾನವರ ಪ್ರಶಂಸೆ ಇವುಗಳ ವರ್ಚಸ್ಸಿನ ತಳದಲ್ಲಿ ಸಿಕ್ಕು ನಾನು ಬಹುಕಾಲದವರೆಗೆ ದೃಢವಾಗಿ ನಂಬಿಕೊಂಡಿದ್ದೇನಂದರೆ— ಸಾವು ಸಮೀಪಸುತ್ತಲಿದ್ದರೂ ಮಾನವನು ಇವುಗಳನ್ನು ನಡಿಸಲೇಬೇಕು. ಆದರೆ ಮರಣವೆಂಬುದು ನನ್ನ ಗ್ರಂಥ ಮತ್ತು ಅವುಗಳ ಸ್ಮರಣವನ್ನೂ ಕೂಡ ನಾಶ ಪಡಿಸುವದರಿಂದ ಅದೂ ಕೂಡ ಜೊಳ್ಳಾದುದೇ ಎಂದು ಬೇಗನೆಯೆ ನನಗೆ ಕಂಡು ಬಂದಿತು. ಕಲೆಯು ಜೀವನಕ್ಕೊಂದು ಅಲಂಕಾರವೆಂದೂ, ಜೀವನದ ಮೋಹನ ಮಂತ್ರವೆಂದೂ ನನಗೆ ಸ್ಪಷ್ಟವಾಗಿ ತೋರುತ್ತಿದ್ದಿತು.

ಆದರೆ, ನನ್ನ ಪಾಲಿಗೆ ಜೀವನವೆಂಬುದೇ ತನ್ನ ಆಕರ್ಷಣವನ್ನು ಕಳೆದುಕೊಂಡ ಒಂದು ವಸ್ತುವಾಗಿದ್ದಿತು. ಹೀಗಿರುವಾಗ ( ನನ್ನ ಕಲೆಯಿಂದ ) ಅನ್ಯರನ್ನು ಹೇಗೆ ಆಕರ್ಷಿಸಬಲ್ಲೆನು ? ಎಲ್ಲಿಯವರೆಗೆ ನನ್ನ ಜೀವನವು ಸ್ವತಃದ ನನ್ನ ಜೀವನವಾಗಿರದೆ, ಅನ್ಯಜೀವನದ ತೆರೆಗಳಲ್ಲಿ ಮಾತ್ರ ನಾನು ತೇಲಿ ಹೋಗುತ್ತಿದ್ದೆನೋ, ಅಲ್ಲಿಯವರೆಗೆ ಕಲೆ ಮತ್ತು ಕಾವ್ಯಗಳಲ್ಲಿ ಪ್ರತಿಬಿಂಬಿತವಾಗುವ ಜೀವನವು ನನಗೆ ಸಂತಸವನ್ನು ಬೀರುತ್ತಲಿದ್ದಿತು. ಆದರೆ, ಜೀವನದ ಅರ್ಥವನ್ನು ಪರಿಶೋಧಿಸುವುದಕ್ಕೆ ನಾನು ಯಾವಾಗ ಆರಂಭಿಸಿದೆನೋ, ಮತ್ತು ನನ್ನ ಜೀವನವು ನನ್ನ ಸ್ವತಃದ್ದಾಗಿರಬೇಕೆಂಬುವುದರ ಆಗತ್ಯವು ನನಗೆ ಯಾವಾಗ ಅನಿಸಹತ್ತಿತೋ, ಆಗ ಆ ಕನ್ನಡಿಯು ನನಗೆ ಅನವಶ್ಯಕವೂ, ಅಪ್ರಯೋಜಕವೂ, ಹಾಸ್ಯಾಸ್ಪದವೂ, ಮನೋವೇದಕವೂ ಆಗಿ ಪರಿಣಮಿಸಿತು. ನನ್ನ ಜೀವನಕ್ಕೊಂದು ಅರ್ಥವಿದೆಯೆಂದು ನಾನು ನಂಬಿಕೊಂಡಿದ್ದಾಗ ಕನ್ನಡಿಯೊಳಗಿನ ರಮಣೀಯ ವಸ್ತುಗಳು ನನಗೆ ರಂಜನೆಯನ್ನುಂಟು ಮಾಡುತ್ತಿದ್ದವು. ಆದರೆ, ನನ್ನ ಜೀವನವು ಅರ್ಥರಹಿತವೂ, ಉಗ್ರವೂ ಆದಾಗ ಅವು ನನ್ನನ್ನು ಬಹುಕಾಲ ರಂಜಿಸಲು ಅಸಮರ್ಥವಾದವು. ಘಟಸರ್ಪವನ್ನೂ, ನನ್ನ ಆಶ್ರಯವನ್ನು ಕತ್ತರಿಸುವ ಇಲಿಗಳನ್ನೂ ನಾನು ಕಂಡಬಳಿಕ ನನಗೆ ಜೇನಿನ ಸ್ವಾದವು ಹೇಗೆ ಸವಿಯೆತ್ತಬೇಕು. ?

ಕಾಡಿನಲ್ಲಿ ದಾರಿತಪ್ಪಿಸಿಕೊಂಡು ಅಲೆದಾಡುವವನಂತೆ ನನ್ನ ಪರಿಸ್ಥಿತಿಯಾಗಿದ್ದಿತು. ಯಾವ ಮಗ್ಗಲಿಗೆ ಹೋದರೂ ದಾರಿಯಿಲ್ಲ. ಅದನ್ನು ಹುಡುಹುಡುಕಿದಷ್ಟು ಗಲಬಿಲಿಯೇ ಎನ್ನುವಂತಾಗಿದ್ದಿತು.

# ೫ ಭೌತಿಕ ಶಾಸ್ತ್ರಗಳ ದುರ್ದಶೆ.

‘ ನಾನು ಜೀವನ ಸಮಸ್ಯೆಯನ್ನು ಕುರಿತು ಕೆಲಮಟ್ಟಿಗೆ ಲಘು ವಾಗಿ ವಿಚಾರ ಮಾಡದೆಯೂ ಇದ್ದಿರಬಹುದು; ಕೆಲಮಟ್ಟಿಗೆ ತಪ್ಪಾಗಿ ತಿಳಿದು ಕೊಂಡಿರಲೂಬಹುದು. ಮಾನವನಿಗೆ ಇಂಥ ನೈರಾಶ್ಯವು ಸ್ವಾಭಾವಿಕವಾದುದಾಗಿರಲಾರದು. ’ ಎಂದು ಹಲವು ಸಾರೆ ನನ್ನೊಳಗೆ ನಾನು ಅಂದುಕೊಂಡೆನು. ನಾನು ಈ ಸಮಸ್ಯೆಗಳ ಮೀಮಾಂಸೆಯನ್ನು ಮಾನವೀಯ ಜ್ಞಾನದ ಸರ್ವ ಶಾಖೆಗಳಲ್ಲಿ ಅರಸಿದೆನು. ನಾನು ಕೆಲ ಸಕ್ಕೆ ಬಾರದ ಕುತೂಹಲದಿಂದಾಗಲೀ ಲಕ್ಷ್ಯವಿಲ್ಲದೆಯಾಗಲೀ ನನ್ನ ಸಂಶೋಧನವನ್ನು ನಡಿಸಿರಲಿಲ್ಲ. ನನ್ನ ಜೀವಕ್ಕೆ ಹಚ್ಚಿಕೊಂಡು ಅಪ್ರತಿ ಹತವಾಗಿ— ಸಾಯುವವನು ಉಳಿಯುವದಕ್ಕೆ ಹೆಣಗುವಂತೆ— ಹಗಲಿ ರಳು ಅದನ್ನೇ ಅರಸುತ್ತಿದ್ದೆನು. ಆದರೆ ಲಭಿಸಿದ್ದು ಮಾತ್ರ ಏನೂ ಇಲ್ಲ.

ಇಷ್ಟೇ ಅಲ್ಲ ನನ್ನಂತೆ ಬಹುಶಾಸ್ತ್ರಗಳನ್ನೆಲ್ಲಾ ಪರಿಶೀಲಿಸಿದ ಬೇರೆ ಎಷ್ಟೋ ಜನರೂ ಕೂಡ ಈ ವಿಷಯದಲ್ಲಿ ನನ್ನಂತೆಯೇ ಅಸಫಲರೇ ಆಗಿದ್ದಾರೆಂದು ನನಗೆ ನಿಶ್ಚಿತವಾಗಿ ತಿಳಿಯಿತು. ‘ ಜೀವನವೆಂಬು ದೊಂದು ನಿರರ್ಥಕ ವಸ್ತು ’ ವೆಂಬುದೇ ಅವರಿಗೂ ಹೊಳೆದ ಮಾತಾ ಗಿದ್ದಿತು. ಅದರಲ್ಲೇನೂ ಸಂಶಯವಿಲ್ಲ.

ಕೇವಲ ನಾನು ಪುಸ್ತಕಗಳಿಂದ ಸಂತುಷ್ಟನಾಗದೆ ಪ್ರತಿಯೊಂದು ವಿಧದಲ್ಲಿಯೂ ಸಂಶೋಧಿಸಿದೆನು. ಜ್ಞಾನದ ಸರ್ವ ಶಾಖೆಗಳಲ್ಲಿಯ ಘನಪಂಡಿತರನ್ನೂ ಪ್ರಯೋಗಜ್ಞರನ್ನೂ ಕೂಡಿಕೊಂಡು ಅವರೊಡನೆ ಆಲೋಚಿಸಿದೆನು. ಅವರು ನನ್ನಿದಿರಿಗೆ ತಮ್ಮ ಜ್ಞಾನಸರ್ವಸ್ವವನ್ನೆಲ್ಲಾ ಪ್ರದರ್ಶಿಸಿದರು. ಬರೀ ಪುಸ್ತಕೀ ಜ್ಞಾನವನ್ನಷ್ಟೇ ಅಲ್ಲ, ಆಪ್ತಾಲೋ ಚನೆಯನ್ನೂ ಕೂಡ ಅವರು ನನ್ನೊಡನೆ ನಡಿಯಿಸಿ, ಜೀವನದ ಪ್ರಶ್ನೆ

ಯನ್ನು ಕುರಿತು ಭೌತಿಕ ವಿಜ್ಞಾನವು ಹೇಳಿಕೊಡಬಹುದಾದ ಎಲ್ಲ ಮಾತುಗಳು ನನ್ನ ಕರತಲಾಮಲಕವಾಗುವಂತೆ ಮಾಡಿದರು.

ಭೌತಿಕ ವಿಜ್ಞಾನದಲ್ಲಿ ಜೀವನದ ಪ್ರಶ್ನೆಗೆ ಸಮಯುಕ್ತಿಕವಾದ ಉತ್ತರವು ದೊರೆಯಲಾರದೆಂದು ನಾನು ಬಹುದಿನಗಳವರೆಗೆ ನಂಬಲಿಲ್ಲ. ಮಾನವ ಜೀವನದ ವಾಸ್ತವಿಕ ಪ್ರಶ್ನೆಗಳಿಗೆ ಸಂಬಂಧವಿಲ್ಲದ ಅನೆಷ್ಟೋ ಮಾತುಗಳ ಬಗೆಗೆ ಮಹತ್ವಪೂರ್ಣವಾಗಿ ಲಕ್ಷ್ಯವನ್ನು ಪ್ರಾರ್ಥಿಸುವ ಭೌತಿಕ ಶಾಸ್ತ್ರದಲ್ಲಿ ನನ್ನ ತಿಳುವಳಿಕೆಗೆ ನಿಲುಕದ ವಿಷಯಗಳೆಷ್ಟೋ ಇರಬಹುದೆಂದು ನನಗಾಗ ತೋರುತ್ತಲಿದ್ದಿತು. ನನ್ನ ಪ್ರಶ್ನೆಗಳಿಗೂ ಭೌತಿಕ ಶಾಸ್ತ್ರದೊಳಗಿನ ಉತ್ತರಗಳಿಗೂ ಮೇಳ ಹೊಂದದೇ ಇರುವುದಕ್ಕೆ ಆ ಶಾಸ್ತ್ರದ ದೋಷವೇ ಕಾರಣವಾಗಿದೆಯೆಂದು ಅನ್ನುವುದಕ್ಕೆ ಬದಲು ನನ್ನ ಅಜ್ಞತೆಯ ಮೂಲಕವೇ ಹಾಗಾಗುತ್ತಿದೆಯೆಂದು ಎಷ್ಟೋ ದಿನಗಳವರೆಗೆ ಧೈರ್ಯ ಸಾಲದೆ ನುಡಿಯುತ್ತಿದ್ದೆನು. ನಾನಾದರೋ ಮನೋವಿನೋದಕ್ಕಾಗಿ ಈ ವಿಷಯವನ್ನು ಕುರಿತು ಆಲೋಚಿಸುತ್ತಿರಲಿಲ್ಲ. ಆದರೆ ನನಗೆ ಅದು ಜೀವನ ಮರಣದ ಪ್ರಶ್ನೆಯಾಗಿದ್ದಿತು. ಆದುದರಿಂದ ಕೊನೆಗೆ ನನಗೆ ಸ್ಪಷ್ಟವಾಗಿ ಅನಿಸಿದ್ದೇನಂದರೆ— ನನ್ನ ಪ್ರಶ್ನೆಗಳಲ್ಲೇನೂ ಕುಂದು ಕೊರತೆಯಿರದೆ ಆ ನ್ಯೂನತೆಯು ಭೌತಿಕ ಶಾಸ್ತ್ರದಲ್ಲಿಯೇ ಇರುವದು.

ನನ್ನ ಐವತ್ತನೇ ವಯಸ್ಸಿನಲ್ಲಿ ನನ್ನನ್ನು ಆತ್ಮಹತ್ಯದ ಕಡೆಗೆ ಓಡಿಸುತ್ತಿದ್ದ ಈ ಪ್ರಶ್ನವು ಸರ್ವ ಸಹಜವೇ ಆಗಿದ್ದಿತು. ತಿಳುವಳಿಕೆಯಿಲ್ಲದ ಒಬ್ಬ ಹುಡುಗನನ್ನು ಮೊದಲು ಮಾಡಿ ಬುದ್ಧಿವಂತನಾದ ಒಬ್ಬ ಹಿರಿಯನವರೆಗೆ ಪ್ರತಿಯೊಬ್ಬ ಮಾನವನ ಅಂತಃಕರಣದಲ್ಲಿ ಈ ಪ್ರಶ್ನವು ಬಿದ್ದುಕೊಂಡೇ ಇದೆ. ಇದರ ಉತ್ತರವನ್ನು ದೊರಕಿಸುವವರೆಗೆ ಬದುಕಿರುವುದೇ ಬಿಗಿಯಾಗಿ ಬಿಡುತ್ತದೆ; ಎಂದು ನಾನು ಸ್ವಾನುಭವದಿಂದ ಕಂಡುಕೊಂಡಿದ್ದೇನೆ. " ಇಂದು ನಾನು ಮಾಡುತ್ತಿರುವ ಅಥವಾ ನಾಳೆ ಮಾಡಬಹುದಾದ ಯಾವ ಮಾತಿನಿಂದಾದರೂ ಏನು ಫಲವಾಗುವುದು?

ಮತ್ತು ನನ್ನ ಸಮಸ್ತ ಜೀವನದ ಪ್ರಯೋಜನವೇನು?" ಎಂಬುದೇ ಆ ಪ್ರಶ್ನೆ.

ಇದೇ ಪ್ರಶ್ನೆಯನ್ನು ವಿಧವಿಧವಾಗಿ ವಿವರಿಸಬಹುದು. "ನಾನು ಯಾಕೆ ಬದುಕಿರಬೇಕು, ನಾನು ಯಾವುದನ್ನಾದರೂ ಯಾತಕ್ಕೆ ಅಪೇಕ್ಷಿಸಬೇಕು. ಅಥವಾ ಯಾವುದನ್ನಾದರೂ ಯಾತಕ್ಕೆ ಮಾಡಬೇಕು?" "ನನ್ನ ಸಲುವಾಗಿ ಹೊಂಚುಹಾಕಿಕೊಂಡು ಕುಳಿತ ಅನಿವಾರ್ಯವಾದ ಮೃತ್ಯುವಿನ ಕೈಯಲ್ಲಿ ನಾಶವಾಗದೆ ಉಳಿಯಬಹುದಾದ ಹುರುಳೇನಾದರೂ ನನ್ನ ಜೀವನದಲ್ಲಿದೆಯೋ?"

ಬಹು ವಿಧದಿಂದ ಬಣ್ಣಿಸಿದ ಈ ಒಂದು ಪ್ರಶ್ನದ ಉತ್ತರವನ್ನು ನಾನು ಭೌತಿಕ ಶಾಸ್ತ್ರದಲ್ಲಿ ಹುಡುಕಾಡಿದೆನು. ಸಮಸ್ತ ಮಾನವ ಜ್ಞಾನವು ಎರಡು ಧ್ರುವಬಿಂದುಗಳುಳ್ಳ, ಎರಡು ಗೋಲಾರ್ಧಗಳಂತೆ ಇಬ್ಭಾಗವಾಗಿರುವುದಾಗಿ ನನಗೆ ಕಂಡಿತು. ಒಂದು ನಕಾರಾತ್ಮಕವಾದ ಋಣಬಿಂದುವು; ಮತ್ತೊಂದು ಪ್ರಜೋದನಾತ್ಮಕವಾದ ಧನಬಿಂದುವು. **(Negative and Positive)** ಆದರೆ ಇವೆರಡರಲ್ಲಿ ಯಾವುದೂ ಜೀವನದ ಪ್ರಶ್ನೆಗೆ ಉತ್ತರವಾಗಲಾರದು.

ಭೌತಿಕ ಶಾಸ್ತ್ರಗಳ ಒಂದು ಮಾಲಿಕೆಯು ನಮ್ಮ ಪ್ರಶ್ನವನ್ನೇ ಮೊದಲು ಸ್ವೀಕರಿಸುವದಿಲ್ಲ. ತನ್ನ ಸ್ವತಂತ್ರ ಪ್ರಶ್ನೆಗಳಿಗೆ ಮಾತ್ರ ಅದು ನಿಶ್ಚಿತವಾದ ಉತ್ತರವನ್ನು ಕೊಡಬಲ್ಲದು. ಈ ಮಾಲಿಕೆಗೆ ಪ್ರಯೋಗಾತ್ಮಕ ಭೌತಿಕ ಶಾಸ್ತ್ರವೆಂದು **(Experimental Sciences)** ಇವುಗಳ ಪರಮೋಚ್ಚಶಿಖರವೆಂದರೆ ಗಣಿತ ಶಾಸ್ತ್ರವು **(Mathematics)** ಇನ್ನೊಂದು ಮಾಲಿಕೆಯು ನಮ್ಮ ಪ್ರಶ್ನವನ್ನೇನೋ ಸ್ವೀಕರಿಸುತ್ತದೆ. ಆದರೆ ಉತ್ತರವನ್ನು ಮಾತ್ರ ಹೇಳುವದಿಲ್ಲ ಈ ಮಾಲಿಕೆಗೆ ವಿಚಾರಾತ್ಮಕ ಭೌತಿಕ ಶಾಸ್ತ್ರವೆಂದು ಹೆಸರು **(Abstract Science)** ಇವುಗಳ ಪರಮೋಚ್ಚಶಿಖರವೆಂದರೆ ತತ್ವಶಾಸ್ತ್ರವು **(Meta Physics)**.

ನನ್ನ ಹೊಸ ಪರಿಯದ ಕಾಲದಿಂದ ವಿಚಾರಾತ್ಮಕ ಭೌತಿಕ ಶಾಸ್ತ್ರಗಳಲ್ಲಿ ಅಭಿರುಚಿಯುಳ್ಳವನಾಗಿದ್ದೆನು. ಕೊನೆಗೆ ಗಣಿತ ಹಾಗೂ ಪ್ರಾಕೃತಿಕ ಶಾಸ್ತ್ರಗಳ ಆಕರ್ಷಣಕ್ಕೆ ಒಳಗಾದೆನು. ನನ್ನ ಪ್ರಶ್ನವು ನನ್ನಲ್ಲಿ ಸ್ಪಷ್ಟ ರೂಪಕ್ಕೆ ಬರುವವರೆಗೆ ಆ ಶಾಸ್ತ್ರಗಳ ಸೋಗಿನ ಉತ್ತರಗಳಿಗೆ ಸಮಾಧಾನ ಪಟ್ಟುಕೊಂಡು ಇದ್ದೆನು.

ಈ ಕಾಲದಲ್ಲಿ ನಾನು ಅಂದು ಕೊಂಡಿದ್ದೇನೆಂದರೆ— "ಪ್ರಯೋಗಾತ್ಮಕ ಭೌತಿಕ ಶಾಸ್ತ್ರಗಳ ರೀತಿಯಂತೆ ಪ್ರತಿಯೊಂದು ವಸ್ತು ವೃದ್ಧಿಂಗತವಾಗಿ, ಸ್ವತಃ ಮಾರ್ಪಡುತ್ತ, ತೊಡಕುಳ್ಳದ್ದಾಗಿ ಪರಿಪೂರ್ಣತೆಯ ಕಡೆಗೆ ಸಾಗುತ್ತದೆ. ನೀನು ಸಂಪೂರ್ಣದ ಒಂದು ಅಂಶನಾಗಿರುವೆ. ಆದುದರಿಂದ ನಿನಗೆ ಶಕ್ಯವಿದ್ದಷ್ಟು ಹೆಚ್ಚುಹೆಚ್ಚಾಗಿ ಅದನ್ನು ಅರಿತುಕೊಳ್ಳಬಲ್ಲೆಯಾದರೆ ನೀನು ಸಂಪೂರ್ಣದಲ್ಲಿ ನಿನಗಿರುವ ಸ್ಥಾನವನ್ನು ಅರಿಯುವೆ. ಅಲ್ಲದೇ ನಿನ್ನನ್ನೂ ನೀನು ಅರಿಯುವಿ." ಆ ಕಾಲದಲ್ಲಿ ಈ ಸಿದ್ಧಾಂತಕ್ಕೆ ನಾನು ಸಂತೃಪ್ತನಾಗಿದ್ದೆನೆಂಬುದು ನಗೆಗೇಡಿನ ಮಾತಾಗಿದೆ. ಆಗ ನನ್ನ ಸ್ನಾಯುಗಳೆಲ್ಲಾ ವೃದ್ಧಿಂಗತವಾಗುತ್ತಲಿದ್ದುದರಿಂದ ನಾನೀ ತತ್ವವನ್ನು ಮನ್ನಿಸಿದ್ದೆನ್ನಬಹುದು. ನನ್ನೊಳಗೆ ಕಂಡು ಬಂದ ಒಂದು ನಿಯಮವನ್ನು ಅದು ಇಡೀ ವಿಶ್ವದ ನಿಯಮವೇ ಎಂದು ತಿಳಿದುಕೊಂಡು ಬಿಟ್ಟೆನು. ಆದರೆ ಕೆಲಕಾಲದ ನಂತರ ಇದಕ್ಕೆ ವಿಪರೀತವಾಗಿ ಅನುಭವ ಬರಹತ್ತಿತು. ನನ್ನ ಸಶಕ್ತ ಶರೀರವು ಬಲಹೀನವಾಗಹತ್ತಿತು; ಹಲ್ಲುಗಳು ಕಳಚಿ ಬೀಳಹತ್ತಿದವು. ಆಗ ಆ ವರೆಗೆ ನಂಬಿದ ಸಿದ್ಧಾಂತದ ಮೇಲೆ ನನಗೆ ಅವಿಶ್ವಾಸವುಂಟಾಯಿತು. 'ಅವಿಚ್ಛಿನ್ನವಾಗಿ ವೃದ್ಧಿಂಗತವಾಗುವುದು' ಎಂಬುದು ನನಗೆ ಅಸಂಭವನೀಯವಾಗಿ ತೋರಿತು. 'ಅನಂತವಾಗಿರುವ ಸ್ಥಲಕಾಲಗಳಲ್ಲಿ ಪ್ರತಿಯೊಂದು ವಸ್ತುವು ವಿಕಾಶ ಹೊಂದುತ್ತ ಜಟಿಲವೂ ಪರಿಪೂರ್ಣವೂ ಆಗುತ್ತ ಮಾರ್ಪಡುತ್ತಿರುತ್ತದೆ.' ಹೀಗೆಂದು ಹೇಳಿದರೆ ಏನೂ ಹೇಳಿದಂತೆಯೇ ಅಲ್ಲ. ಅವೆಲ್ಲಾ ಬರೀ ಅರ್ಥವಿಲ್ಲದ ಶಬ್ದಗಳು. ಯಾಕಂದರೆ ಅನಂತದಲ್ಲಿ ಜಟಿಲವೂ ಇಲ್ಲ ಸಹಜವೂ ಇಲ್ಲ; ಮುಂದೆಂಬುದೂ ಇಲ್ಲ;

ಹಿಂದೆಂಬುದೂ ಇಲ್ಲ; ಒಳ್ಳೆಯದೆಂಬುದೂ ಇಲ್ಲ. ಕೆಟ್ಟದ್ದೆಂಬುದೂ ಇಲ್ಲ. ಭೌತಿಕ ಶಾಸ್ತ್ರಗಳಲ್ಲಿ ಜೀವನದ ಪ್ರಶ್ನಕ್ಕೆ ಸಂಬಂಧವಿಲ್ಲದ, ಇಲ್ಲವೆ ಅದಕ್ಕೆ ತೀರಕಡಿಮೆ ಸಂಬಧವುಳ್ಳ ವಿಷಯಗಳನ್ನು ಅನುಲಕ್ಷಿಸಿದರೆ ಮಾನವನ ಬುದ್ಧಿವಂತಿಕೆಯನ್ನು ಪ್ರಶಂಸಿಸದೆ ಇರಲಿಕ್ಕಾಗದು. ಆದರೆ ಜೀವನದ ಸಮಸ್ಯೆಯ ಬಗೆಗೆ ಅದು ಮೌನವನ್ನು ತಾಳುತ್ತದೆ. ಅಥವಾ ಆ ಶಾಸ್ತ್ರ ಗಳು ಈ ಪ್ರಶ್ನವನ್ನೇ ಹಾರಿಸಿಬಿಡುತ್ತವೆ. ಅವು ಹೇಳುವದೇನಂದರೆ— "ನೀನು ಯಾರೆಂಬ ಮತ್ತು ನೀನು ಬದುಕಿರುವುದು ಏತಕ್ಕೆಂಬ ಪ್ರಶ್ನಕ್ಕೆ ನಮ್ಮ ಬಳಿಯಲ್ಲಿ ಉತ್ತರವಿಲ್ಲ. ಅಲ್ಲವೆ ಅದು ನಮ್ಮ ಕೆಲ ಸವೂ ಅಲ್ಲ, ಪ್ರಕಾಶದ ನಿಯಮ, ರಾಸಾಯನಿಕ ಸಂಯೋಗ, ದೇಹ ಗಳು ಮತ್ತು ಅವುಗಳ ಆಕೃತಿಗಳ ನಿಯಮ, ಅಂಕಿಗಳು ಮತ್ತು ಅವುಗಳ ಬೆಲೆ ಮುಂತಾದವುಗಳ ವಿಷಯದಲ್ಲಿ ನೀವು ತಿಳಿದುಕೊಳ್ಳಲು ಅಪೇಕ್ಷಿಸಿದರೆ ನಿಮಗೆ ನಮ್ಮಿಂದ ಸ್ಪಷ್ಟವಾದ ನಿಶ್ಚಿತ ಉತ್ತರಗಳು ಸಿಗಬಲ್ಲವು."

ಭೌತಿಕ ಶಾಸ್ತ್ರಗಳಿಗೂ ಜೀವನ ಸಮಸ್ಯದ ಪ್ರಶ್ನಕ್ಕೂ ಇರುವ ಸಂಬಂಧವು ಎಷ್ಟೆಂದರೆ— 'ನಾನು ಬದುಕಿ ಇರುವುದು ಏತಕ್ಕೆ ?' ಎಂಬ ಪ್ರಶ್ನೆಗೆ ಅವರ ಉತ್ತರವಿದು:— 'ಅನಂತವಾದ ಸ್ಥಲ, ಅನಂತ ವಾದ ಕಾಲ ಇವುಗಳಲ್ಲಿ ಅನಂತ ಸೂಕ್ಷ್ಮವಾಗಿರುವ ಅಣುಗಳು ತಮ್ಮ ರೂಪವನ್ನು ಅನಂತ ಜಟಿಲತೆಯಿಂದ ಮಾರ್ಪಡಿಸಿಕೊಳ್ಳುವವು. ಈ ಅಣುರೂಪಾಂತರದ ನಿಯಮವನ್ನು ನೀನು ತಿಳಿದುಕೊಂಡಾಗ ಪೃಥ್ವಿಯ ಮೇಲೆ ನಿನ್ನ ಜೀವನವೇತಕ್ಕೆಂಬುದು ನಿನಗೆ ತಿಳಿಯುವದು.'

ಇನ್ನು ವಿಚಾರಾತ್ಮಕ ಭೌತಿಕ ಶಾಸ್ತ್ರಗಳ (**Abstract Sciences**) ವಿಷಯದಲ್ಲಿ ನಾನು ಅಂದುಕೊಂಡದ್ದೇನಂದರೆ— "ಸಮಸ್ತ ಮಾನವ ಕೋಟಿಯು ಆತ್ಮಿಕ ತತ್ವಗಳ ಹಾಗೂ ಆತ್ಮಿಕ ಧ್ಯೆಯಗಳ ತಳಹದಿಯ ಮೇಲೆ ಬಾಳಿಬೆಳೆಯುತ್ತದೆ. ಆ ಧ್ಯೇಯಗಳು ಧರ್ಮ, ಶಾಸ್ತ್ರ, ಕಲೆ, ರಾಜ- ಸಂಸ್ಥೆ ಮುಂತಾದವುಗಳಲ್ಲಿ ಪ್ರಕಟವಾಗುತ್ತವೆ. ಆ ಧ್ಯೇಯಗಳು ಹೆಚ್ಚು

ಹೆಚ್ಚು ಉಚ್ಚಸ್ಥಿತಿಗೆ ಹೋದಹಾಗೆ ಮಾನವ ಕೋಟಿಯು ಪರಮೋಚ್ಚ
ಸ್ಥಿತಿಗೆ ಏರುವುದು. ನಾನು ಮಾನವಕೋಟಿಯ ಅಂಶವಾಗಿದ್ದೇನೆ.
ಆದುದರಿಂದ ಮಾನವಕೋಟಿಯ ಧ್ಯೇಯಗಳನ್ನು ಗುರುತಿಸಿ ಅವುಗಳನ್ನು
ಅನುಭವಕ್ಕೆ ತಂದುಕೊಳ್ಳುವುದೇ ನನ್ನ ಕೆಲಸವಾಗಿದೆ. ” ನನ್ನ ಬುದ್ಧಿ
ದೌರ್ಬಲ್ಯದ ಕಾಲದಲ್ಲಿ ನಾನು ಆ ಸಿದ್ಧಾಂತಕ್ಕೆ ಸಮಾಧಾನವನ್ನು ಹಚ್ಚಿ
ಕೊಂಡಿದ್ದೆನು. ಆದರೆ ಜೀವನ ಸಮಸ್ಯೆಯು ನನ್ನೆದಿರಿಗೆ ಬಂದು ನಿಚ್ಚ
ಳವಾಗಿ ನಿಲ್ಲಹತ್ತಿದಂದಿನಿಂದ ಈ ವಿಚಾರಗಳ ಅಸ್ತಿತ್ವವೇ ಅಳಿಯಹ
ತ್ತಿತು. ಮೂಢತನವಲ್ಲದಿದ್ದರೂ ಈ ಸಿದ್ಧಾಂತದ ವಿಚಿತ್ರತೆಯು ಎಲ್ಲಿದೆ
ಯೆಂದರೆ— ‘ ನಾನಾರು, ನನ್ನ ಬಾಳುವೆ ಏತಕ್ಕೆ, ನನ್ನ ಕರ್ತವ್ಯವೇನು’
ಎಂಬ ಪ್ರಶ್ನವನ್ನು ಬಿಡಿಸಿಕೊಳ್ಳುವದಕ್ಕೆ ‘ ಸಮಸ್ತದ ಬಾಳುವೆಯು
ಏನಿದೆ ? ಎಂಬುದನ್ನು ಅರಿತುಕೊಳ್ಳಬೇಕಂತೆ ! ತಾನೇನೆಂಬದನ್ನು ಅರಿ
ತುಕೊಳ್ಳುವದಕ್ಕೆ ಎಲ್ಲಕೂ ಮೊದಲಿಗೆ ಅಗಾಧವಾದ ಮಾನವಕೋಟಿಯ
ನ್ನೆಲ್ಲ ಅರಿತುಕೊಳ್ಳಬೇಕೆಂದರೇನಿದು ! ಜನಸಮೂಹವೆಂದರೆ ನನ್ನಂತೆಯೆ
ಒಬ್ಬರ ತಿಳುವು ಇನ್ನೊಬ್ಬರಿಗಿಲ್ಲದ ಜನಗಳ ಗುಂಪು.

ಪ್ರಯೋಗಾತ್ಮಕ ಹಾಗೂ ವಿಚಾರಾತ್ಮಕ ಇವೆರಡರಲ್ಲಿಯೂ ಕೇವಲ
ಶಾಸ್ತ್ರೀಯ ಮತ್ತು ಅರ್ಧಶಾಸ್ತ್ರೀಯವೆಂದು **(Semi Science)** ಎರಡು
ವಿಧದ ಭೌತಿಕ ಶಾಸ್ತ್ರಗಳಿವೆ. ತಮ್ಮ ಅಳವಿಗೆ ಮೀರಿದ ಪ್ರಶ್ನಗಳಿಗೆ
ಉತ್ತರಗಳನ್ನು ಹೇಳಲೆಳಸುವ ವ್ಯಾಜ್ಯಶಾಸ್ತ್ರ, ಸಾಮಾಜಿಕ ಚರಿತ್ರೆ
ಮೊದಲಾ ಅರ್ಧ- ಶಾಸ್ತ್ರೀಯ ಶಾಸ್ತ್ರಗಳು ಒಬ್ಬ ಮನುಷ್ಯನ ಜೀವನ
ಪ್ರಶ್ನವನ್ನು ಬಿಡಿಸುವದಕ್ಕೆ ಸಮಸ್ತ ಮಾನವಕೋಟಿಯ ಜೀವನ
ಪ್ರಶ್ನವನ್ನು ನಿರ್ಧರಿಸುವ ನಟನೆಯನ್ನು ಮಾಡುತ್ತವೆ.

ಪ್ರಯೋಗಾತ್ಮಕ ವಿಜ್ಞಾನದ ‘ ಅಂತವಿಲ್ಲದ ಅಣುಪರಿವರ್ತನದ
ಗಡುಚಾದ ರೀತಿಯನ್ನು ತಿಳಿದುಕೊಳ್ಳುವುದೇ ನಿನ್ನ ಜೀವನವನ್ನು ಅರಿ
ಯುವದಕ್ಕೆ ದಾರಿ ’ ಯೆಂಬ ಸಿದ್ಧಾಂತವು ಹೇಗೆ ಅತೃಪ್ತಿಕರವಾಗಿ
ದೆಯೋ ಹಾಗೆಯೇ ಈ ವಿಚಾರಾತ್ಮಕ ವಿಜ್ಞಾನದ ಸಿದ್ಧಾಂತವೂ ಕೂಡ
ಅತೃಪ್ತಿಕರವೇ ಆಗಿದೆ. ‘ ಯಾವುದರ ಆರಂಭವನ್ನಾಗಲೀ ಮುಗಿತಾ

ಮನಸ್ಸಾಗಲೀ ತಿಲಮಾತ್ರವಾದರೂ ನಾವು ಅರಿಯಲಾರೆವೋ ಅಂಥ ಮಾನವಕೋಟಿಯೆಂಬುದರ ಬಗೆಗೆ ಅನುಶೀಲನ ಮಾಡುವುದೇ ನಿನ್ನ ಸ್ವತಃದ ಜೀವನವನ್ನು ಅರಿಯುವದಕ್ಕೆ ಉಪಾಯವು' ಎಂಬುದು ಅವರ ಸಿದ್ಧಾಂತ.

ವಿಚಾರಾತ್ಮಕ ಭೌತಿಕ ಶಾಸ್ತ್ರಗಳ ಧ್ರುವಬಿಂದು ಸ್ವರೂಪವಾಗಿ ತತ್ವಶಾಸ್ತ್ರಗಳು ( **Philosophy** ) ನಿಲ್ಲುತ್ತವೆ. 'ನಾನು ಏನಿದ್ದೇನೆ, ಮತ್ತು ವಿಶ್ವವು ಏನಿದೆ?' ಎಂಬುದೇ ಈ ಶಾಸ್ತ್ರದ ಸ್ಪಷ್ಟ ಪ್ರಶ್ನವು. ತತ್ವಜ್ಞರು ನನ್ನೊಳಗಿನ ಹಾಗು ಸಮಸ್ತದೊಳಗಿನ ಜೀವನ ಸತ್ವ ವನ್ನು 'ಭಾವ' 'ದ್ರವ್ಯ' 'ಆತ್ಮ' 'ಸಂಕಲ್ಪ' ಮೊದಲಾದ ಹೆಸರು ಗಳಿಂದ ಕರೆದು, ಅದು ಎರಡೂ ಕಡೆಯಲ್ಲಿಯೂ (ನಿನ್ನೊಳಗೂ ವಿಶ್ವ ದೊಳಗೂ ) ಒಂದೇ ಆಗಿದೆಯೆಂದೂ, ಅದೇ ಆಗಿದೆಯೆಂದೂ ಹೇಳು ತ್ತಾರೆ. ಆದರೆ ಅದು 'ಯಾಕೆ ಇದೆ'ಯೆಂಬುದನ್ನು ತತ್ವಜ್ಞನು ಅರಿತೂ ಇಲ್ಲ, ಮತ್ತು ಆತನು ಯೋಗ್ಯ ವಿಚಾರಶೀಲನಾದರೆ ಆ ಬಗ್ಗೆ ಹೇಳಿ ಕೊಡುವುದೂ ಇಲ್ಲ. ನಾನು ಕೇಳುವುದೇನಂದರೆ ಈ ಮೂಲ ಸತ್ವ ಯೆಂಬುದು ಏತಕ್ಕೆ ಇದೆ? ಅದು ಇದ್ದುದರ ಅಥವಾ ಇರುವುದರ ಪರಿಣಾಮವೇನು? ತತ್ವಜ್ಞಾನವು ಇದಕ್ಕೆ ಉತ್ತರವನ್ನು ಈಯುವ ದಿಲ್ಲವೆಂಬುದಿಷ್ಟೇ ಅಲ್ಲ, ತಾನು ಕೂಡ ಇದೇ ಪ್ರಶ್ನವನ್ನು ಕೇಳು ತ್ತದೆ. ನಿಜವಾದ ತತ್ವಜ್ಞಾನದ ದುಡಿಮೆಯ ಉದ್ದೇಶವೆಲ್ಲಾ ಈ ಪ್ರಶ್ನೆ ವನ್ನು ಸ್ಪಷ್ಟವಾಗಿ ಇಡುವುದೇ ಆಗಿದೆ. 'ಏನು' ಎಂಬ ಪ್ರಶ್ನಕ್ಕೆ ಅದು 'ಸಮಸ್ತ ಮತ್ತು ಶೂನ್ಯ'ವೆಂದೂ, 'ಯಾಕೆ' ಎಂಬ ಪ್ರಶ್ನಕ್ಕೆ 'ನಾನರಿಯೆ'ನೆಂದೂ ಉತ್ತರವನ್ನೀಯುತ್ತದೆ.

ತತ್ವಜ್ಞಾನದ ಈ ಉತ್ತರಗಳೆನ್ನೆಲ್ಲ ಮಥಿಸಿದರೆ ಉತ್ತರವೆಂಬಂತಹ ದೇನೂ ಸಿಕ್ಕಂತೆಯೇ ಅಲ್ಲವೆಂದು ನಮಗೆ ಸ್ಪಷ್ಟವಾಗಿ ತೋರದಿರದು. ಇದು ಪ್ರಶ್ನವನ್ನೇ ಇನ್ನೊಂದು ತೊಡಕಾದ ರೀತಿಯಲ್ಲಿ ಇಟ್ಟಂತೆಯೇ ಸರಿ.

## ೬. ತತ್ವಶಾಸ್ತ್ರಗಳಲ್ಲಿಯೂ ಅದೇ ನಿರಾಶೆ.

ಜೀವನ ಸಮಸ್ಯೆಯನ್ನು ಬಿಚ್ಚುವ ಪ್ರಯತ್ನದಲ್ಲಿ ನನ್ನ ಸ್ಥಿತಿಯು ಕಟ್ಟಡವಿಯಲ್ಲಿ ದಾರಿತಪ್ಪಿದವನಂತೆ ಆಯಿತು. ಅತನು ಬಯಲಿಗೋಡು ತ್ತಾನೆ. ಮರದ ತುದಿಗೇರುತ್ತಾನೆ. ನಾಲ್ಕೂ ದಿಕ್ಕಿಗೆ ಬಹುದೂರದ ವರೆಗೆ ನೋಡುತ್ತಾನೆ. ಆದರೆ ತನ್ನ ಮನೆ ಅಲ್ಲಿ ಇಲ್ಲ; ಇರಲಿಕ್ಕೆ ಶಕ್ಯವೂ ಇಲ್ಲ ವೆಂದು ಆತನಿಗೆ ಗೊತ್ತಾಗಿ ಬಿಡುತ್ತದೆ. ಮರಳಿ ಆತನು ಕಗ್ಗತ್ತಲೆಯ ಕಟ್ಟಡವಿಯನ್ನು ಸೇರುತ್ತಾನೆ. ಅಲ್ಲೇನಿದೆ? ಎಲ್ಲಾ ಕತ್ತಲು. ಅಲ್ಲಿಯೂ ಅವನ ಮನೆಯಿಲ್ಲ.

ಅದರಂತೆ ಮಾನವಜ್ಞಾನವೆಂಬ ಅರಣ್ಯದಲ್ಲಿ ನಾನು ಸೇರಿಕೊಂಡೆ. ಗಣಿತಾತ್ಮಕ ಹಾಗು ಪ್ರಯೋಗಾತ್ಮಕ ವಿಜ್ಞಾನಗಳ ಬೆಳಕಿನಲ್ಲಿ ನನಗೆ ಕ್ಷಿತಿಜ್ಯವು ಕಾಣುತ್ತಿದ್ದಿತಾದರೂ ನಿಜವಾಗಿ ಅತ್ತ ನನ್ನ ಮನೆಯಿರಲಿಲ್ಲ. ವಿಚಾರಾತ್ಮಕ ದರ್ಶನಶಾಸ್ತ್ರಗಳ ಕಗ್ಗತ್ತಲೆಯೊಳಗೆ ಘುಮುಕಿದಷ್ಟೂ ನನ್ನ ಕಣ್ಣಿಗೆ ಮಬ್ಬೇ ಮಬ್ಬು ಕವಿಯಿತು. ಕೊನೆಗೆ ನನಗೆ ಅನಿಸಿಬಿಟ್ಟಿ ದ್ದೇನಂದರೆ— ಇಲ್ಲಿಯೂ ದಾರಿಯಿಲ್ಲ; ಇರಲಿಕ್ಕೂ ಶಕ್ಯವಿಲ್ಲ. ಮಾನವ ಜ್ಞಾನದ ಬೆನ್ನು ಹತ್ತಿದಷ್ಟೂ ನಾನು ನನ್ನ ಪ್ರಶ್ನದಿಂದ ದೂರ ದೂರ ಹೋಗುತ್ತಿದ್ದೇನೆಂದು ಮನವರಿಕೆಯಾಯಿತು. ಒಟ್ಟಾರೆ ಈ ಶಾಸ್ತ್ರಗಳು ಎಷ್ಟೇ ಚಿತ್ತಾಕರ್ಷಕವಾದವುಗಳಾಗಿದ್ದರೂ ನನ್ನ ಅಗತ್ಯವನ್ನೂ, ನನ್ನ ಪ್ರಶ್ನದ ಉತ್ತರವನ್ನೂ ಅವು ಪೂರೈಸಲಾರದವುಗಳಾಗಿದ್ದವು.

ನಾನು ಮನಸ್ಸಿನಲ್ಲಿ ಯೋಚಿಸಿದ್ದೇನಂದರೆ— 'ಭೌತಿಕಶಾಸ್ತ್ರವು ಏನು ತಿಳಕೊಳ್ಳಬೇಕೆಂದು ಪ್ರಯತ್ನಿಸುತ್ತಿದೆಯೋ ಅದನ್ನು ನಾನು ಬಲ್ಲೆ. ಆದರೆ ಆ ಹಾದಿಯಲ್ಲಿ ನನ್ನ ತೊಡಕು ಬಿಚ್ಚದು!' ಇನ್ನು-ನನ್ನ ಪ್ರಶ್ನವನ್ನು ಬಿಡಿಸುವದೇ ವಿಚಾರಾತ್ಮಕ ದರ್ಶನ ಶಾಸ್ತ್ರದ ( **Abstract Science** ) ಗುರಿಯಾಗಿದ್ದರೂ ಅದರಲ್ಲಿಯೂ ಯಾವ ಉತ್ತರವೂ ಹೊರಡಲಿಲ್ಲ.

ನನಗೆ ನಾನು ಕೊಟ್ಟುಕೊಂಡ ಉತ್ತರವೇ ಅಲ್ಲಿಸಿಗುವದು. ಅದೇನಂದರೆ- 'ನನ್ನ ಜೀವನದ ಅರ್ಥವೇನು?'--'ಏನೂ ಇಲ್ಲ' 'ಅಸ್ತಿತ್ವದಲ್ಲಿರುವ ವಸ್ತುಗಳೆಲ್ಲಾ ಯಾಕೆ ಅಸ್ತಿತ್ವದಲ್ಲಿವೆ?' 'ಅಸ್ತಿತ್ವದಲ್ಲಿದ್ದದ್ದೇ ಅದಕ್ಕೆ ಕಾರಣ.'

ಮಾನವ ಜ್ಞಾನದ ಒಂದು ಶಾಖೆಯಲ್ಲಿ ನನಗೇನೂ ಸಂಬಂಧವಿಲ್ಲದಂಥ ಉತ್ತರಗಳು ಹೇರಳವಾಗಿ ಸಿಕ್ಕವು. ನಕ್ಷತ್ರಗಳ ರಾಸಾಯನಿಕ ಘಟಕಾವಯವಗಳು, ಹರ್ಕ್ಯೂಲಿಸ್ ನಕ್ಷತ್ರ ಪುಂಜದ ಕಡೆಗೆ ಸೂರ್ಯನ ಸಂಚಲನ, ಮನುಷ್ಯನ ಮತ್ತು ಅನ್ಯಪ್ರಾಣಿಗಳ ಮೂಲ, ಈಥರವೆಂಬ ಸೂಕ್ಷ್ಮ ದ್ರವ್ಯದ ಅಣುಗಳ ಆಕೃತಿ ವಿಕ್ಷೇಪ ಮುಂತಾದವುಗಳೇ ಆ ವಿಷಯಗಳು. ಆದರೆ 'ಜೀವನವೆಂದರೇನು?' ಎಂಬ ಪ್ರಶ್ನೆಗೆ ಅದು ಕೊಡುವ ಉತ್ತರವೆಂದರೆ— " ಪರಮಾಣುಗಳು ಒಂದುಗೂಡಿದ್ದರಿಂದ ನಿನ್ನ ಜೀವನವು ಉಂಟಾಗಿದೆ. ಈ ಪರಮಾಣುಗಳ ಪರಸ್ಪರ ಚಲನವಲನವೇ ಜೀವನ. ಅವುಗಳಲ್ಲಿ ಚಲನವಿರುವವರೆಗೆ ನೀನು ಜೀವಂತನಾಗಿರುವುದು. ಅದು ಕಟ್ಟಾದೊಡನೆಯೇ ನಿನ್ನ ಜೀವನವೂ ಕಟ್ಟಾಗುವದು. ಅದರ ಜೊತೆಗೆ ನಿನ್ನ ಪ್ರಶ್ನೆಗಳೂ ಮಾಯವಾಗುವವು " ಭೌತಿಕ ಶಾಸ್ತ್ರವು ತನ್ನ ಸಿದ್ಧಾಂತಕ್ಕೆ ಸಂಪೂರ್ಣವಾಗಿ ಅಂಟಿಕೊಂಡಿರುವವರೆಗೆ ಇದೇ ಉತ್ತರವನ್ನು ಅದು ಹೇಳಬಲ್ಲದು.

ಆದರೆ ಈ ಉತ್ತರವು ಉತ್ತರವೇ ಆಗದು. ನಾನು ತಿಳಿಯಬೇಕಾದುದು ಜೀವನದ ಅರ್ಥವೇನೆಂಬುದನ್ನು. ಆದರೆ 'ಅನಂತದ ಒಂದು ತುಣುಕು ನೀನೆಂದು ಹೇಳಿ, ಅದು ಅರ್ಥದ ಶಕ್ಯತೆಯನ್ನು ಕೂಡ ನಾಶಗೊಳಿಸುವದು. ಭೌತಿಕ ಶಾಸ್ತ್ರದ ಇನ್ನೊಂದು ಶಾಖೆಯಾದ ವಿಚಾರಾತ್ಮಕ ವಿಜ್ಞಾನವು ಈ ಪ್ರಶ್ನೆಗೆ ಯಾವಾಗಲೂ ಕೊಡುತ್ತಬಂದ ಉತ್ತರವೇನೆಂದರೆ— 'ಜಗತ್ತೆಂಬುದು ಅನಂತವೂ ಅಜ್ಞೇಯವೂ ಆಗಿದೆ. ಮಾನವ ಜೀವನವೆಂಬುದು ಆ ಅವಿದಿತ ಸಮಸ್ತದ ಒಂದು ಅವಿದಿತ ಅಂಶವಾಗಿದೆ.' ಪ್ರಯೋಗಾತ್ಮಕ ಹಾಗೂ ವಿಚಾರಾತ್ಮಕ ಭೌತಿಕ ಶಾಸ್ತ್ರಗಳಿಗೆ ಕೈ ಕೈ ಹಿಡಿಸುವ ಅರ್ಧ ಶಾಸ್ತ್ರೀಯ **(Semi Sciences)**

ಗಣಿತದ ವ್ಯಾಜ್ಯ, ರಾಜ್ಯನೀತಿ, ಇತಿಹಾಸ ಮೊದಲಾದವುಗಳ ಕಾಣಿ ಯನ್ನೂ ಕೂಡ ನಾನು ತಿರಸ್ಕರಿಸಿದೆನು. ಯಾಕೆಂದರೆ ಆ ಶಾಸ್ತ್ರಗಳು ಹೇಳುವ 'ಪ್ರವೃದ್ಧಿ' ಮತ್ತು 'ಪ್ರಗತಿ' ಎಂಬವುಗಳ ಗುರಿಯಾದರೂ ನನ್ನ ಪ್ರಶ್ನೆಗಳಿಗೆ ದೂರವಾಗಿಯೇ ಇದ್ದಿತು.

ನಿಜವಾದ ವಿಚಾರಾತ್ಮಕ ವಿಜ್ಞಾನದಲ್ಲಿ ಅಥವಾ ಅಚ್ಚ ತತ್ವ ಜ್ಞಾನದಲ್ಲಿ ಈ ಬಗೆಗೆ ಸಾಕ್ರೆಟಿಸ್, ಶೋಪನ್‌ಹಾರ್, ಸಾಲೋಮನ್, ಮತ್ತು ಬುದ್ಧ ಇವರೆಲ್ಲರೂ ಹೇಳಿದ ಉತ್ತರವು ಒಂದೇ ಆಗಿದೆ. ಹೇಗೆಂದರೆ—

ಸಾಕ್ರೆಟಿಸ್‌ನು ತನ್ನ ಮರಣಸಿದ್ಧತೆಯಲ್ಲಿದ್ದಾಗ ಹೇಳಿದ್ದೇನಂದರೆ— "ನಾವು ಜೀವನದಿಂದ ದೂರ ಸರಿದಷ್ಟು ಸತ್ಯವನ್ನು ಸಮೀಪಿಸು ತ್ತೇವೆ. ಸತ್ಯದ ಭಕ್ತರು ಮಾಡಬೇಕಾದುವದೇನು? ಶರೀರದಿಂದಲೂ, ಅದಕ್ಕೆ ಕಾರಣವಾಗುವ ಬೇರೆ ಪಾಪಗಳಿಂದಲೂ ಬಿಡುಗಡೆಯಾಗುವುದು! ಇದು ಸರಿ— ಆದರೆ ಸಾಯುವಾಗ ನಾವು ನಲಿಯುವದಿಲ್ಲವೇಕೆ?

"ಇಡೀ ಆಯುಷ್ಯವನ್ನೆಲ್ಲಾ ಮರಣ ಸಂಶೋಧನೆಯಲ್ಲಿಯೇ ಕಳೆದ ಜ್ಞಾನಿಗಳಿಗೆ ಮರಣವು ಭಯಂಕರವೆನಿಸುವದಿಲ್ಲ."

ಶೋಪನ್‌ಹಾರ್ ಹೇಳುತ್ತಾನೆ—

"ಜಗತ್ತಿನ ಸ್ಥಿತಿಯು ಜಗತ್ತಿನ ಸಂಕಲ್ಪಶಕ್ತಿ (**Will**) ಯನ್ನ ವಲಂಬಿಸಿದೆ. ಜಗತ್ತಿನೊಳಗಿನ ಸರ್ವ ಸಜೀವ ನಿರ್ಜೀವ ಪದಾರ್ಥಗಳಿಗೆ ಅದೇ ಕಾರಣವಾಗಿದೆ. ಅದು ಲುಪ್ತವಾದಲ್ಲಿ ಜಗತ್ತೂ ಲುಪ್ತವಾಗುತ್ತದೆ. ಆದರೆ ಇದಕ್ಕೆ ಪ್ರತಿಭಟಿಸುವುದು ಮಾನವನ ಸಂಕಲ್ಪವೊಂದೇ ಆಗಿದೆ. ಆತನಲ್ಲಿರುವ ಬದುಕಿರಬೇಕೆಂಬ ಇಚ್ಛೆಯು ಪ್ರಾಕೃತಿಕವಾಗಿದೆ. ಅಂತೇ ಆತನ ಸಂಕಲ್ಪ (**Will**) ವೆಂದೂ ಲುಪ್ತವಾಗದು. ಆದರೆ ಕೇಳಿರಿ— ಯಾವನಲ್ಲಿ ಅದು ಲೋಪವಾಗಿದೆಯೋ ಅವನ ಮಟ್ಟಿಗೆ ಸೂರ್ಯ ಚಂದ್ರ ನಕ್ಷತ್ರಾದಿಗಳೆಲ್ಲಾ ಇಲ್ಲದಂತೆಯೇ."

ಸಾಲೋಮನ್ ಅನ್ನುತ್ತಾನೆ—

“ಜೀವನವು ವ್ಯರ್ಥ. ಜಗತ್ತಿನಲ್ಲಿ ಮನುಷ್ಯನು ಹೇವಂಡ ಪಡುತ್ತಿದ್ದಾನಲ್ಲಾ— ಅದರ ಪ್ರಯೋಜನವೇನು? ಒಂದು ತಳಿಯ ಬದಲು ಮತ್ತೊಂದು ತಳಿ. ಅಂತೂ ಜಗತ್ತು ಯಾವಾಗಲೂ ಇರತಕ್ಕದು. ಮೊದಲಿದ್ದ ವಸ್ತು ಸರಿಯಾಗಿ ಹಿಂದೂಗಡೆಯೂ ಇರತಕ್ಕದೇ. ಜಗತ್ತಿನಲ್ಲಿ ಯಾವ ಪದಾರ್ಥವೂ ಹೊಸದಲ್ಲ. ‘ಇಗೋ, ಇಲ್ಲೊಂದು ಹೊಸದೇನೋ ಆದೆ’ಯೆಂದು ತೋರಿಸತಕ್ಕ ಪದಾರ್ಥವೇನಾದರೂ ಇದೆಯೇ? ಹಿಂದಿನ ಸಂಗತಿಗಳನ್ನೆಲ್ಲಾ ಸಂಪೂರ್ಣ ಮರೆತು ಬಿಟ್ಟಿದ್ದೇವೆ.”

“ನಾನು ಜೆರೂಸಲೇಮಿನಲ್ಲಿ ಇಸ್ರಾಯೇಲ್ ಜನಾಂಗದ ಚಕ್ರವರ್ತಿಯಾಗಿದ್ದೆ. ನಾನು ಜಗತ್ತಿನ ಸರ್ವ ಸಂಗತಿಗಳ ನಿಜಸ್ಥಿತಿಯನ್ನು ಅರಿತುಕೊಳ್ಳುವ ಪ್ರಯತ್ನ ಮಾಡಿದೆ. ‘ಆ ಪದಾರ್ಥಗಳ ನಿಜಸ್ಥಿತಿಯನ್ನು ಅರಿತುಕೊಳ್ಳುವ ಪ್ರಯತ್ನ ಮಾಡಬೇಕು’ ಎಂಬ ಲವಲವಿಕೆಯನ್ನು ದೇವರು ಮನುಷ್ಯನ ಹೃದಯದಲ್ಲಿ ಹುಟ್ಟಿಸಿಯೇ ಬಿಟ್ಟಿದ್ದಾನೆ. ನನ್ನ ಪ್ರಯತ್ನದಿಂದಾದ ಪ್ರಯೋಜನವೇನೆಂದರೆ— ಜಗತ್ತಿನಲ್ಲಿ ವ್ಯಾಕುಲತೆ ದುಃಖಗಳನ್ನು ಬಿಟ್ಟರೆ ಏನೇನೂ ಇಲ್ಲ’ ಎಂದು ಸ್ಪಷ್ಟವಾಗಿಬಿಟ್ಟಿತು ನನಗೆ.

“ನಾನು ನನ್ನ ಹೃತ್ಪೂರ್ವಕವಾಗಿ ಹೇಳುತ್ತೇನೆ. ನಾನು ದೊಡ್ಡ ಸಿರಿವಂತ. ಜೇರುಸಲೇಮಿನಲ್ಲಿ ಆಗಿಹೋದ ಎಲ್ಲರಿಗಿಂತ ನಾನು ಹೆಚ್ಚು ಬುದ್ಧಿವಂತನಾಗಿದ್ದೆ. ನನಗೆ ಹೆಚ್ಚು ಜ್ಞಾನವು ಇತ್ತು. ಆದರೆ ಕೊನೆಗೆ ಹೊರಟ ತಥ್ಯವೇನೆಂದರೆ— ವ್ಯಾಕುಲತೆಯು ಅಲ್ಲದೇ ಮತ್ತೇನೂ ಇಲ್ಲ. ಯಾಕೆಂದರೆ ಜ್ಞಾನ ಬೆಳೆದಂತೆ ದುಃಖವು ಹೆಚ್ಚುತ್ತದೆ. ಜ್ಞಾನವನ್ನು ಬೆಳೆಸಿಕೊಳ್ಳುವವನು ತನ್ನ ದುಃಖವನ್ನೂ ಹೆಚ್ಚಿಸಿಕೊಳ್ಳುತ್ತಾನೆ.

“ಆಗ ನಾನು ನಿಶ್ಚಯಿಸಿಕೊಂಡಿದ್ದೇನೆಂದರೆ— ನಾನು ಮರುಳವನ್ನುಂಟುಮಾಡುವ ಸಾಹಿತ್ಯಗಳನ್ನೆಲ್ಲಾ ಒಂದುಗೂಡಿಸಬೇಕು. ಮತ್ತು

ನಗೆಕೆಲೆಗಳಲ್ಲಿ ಜೀವನವನ್ನು ಕಳೆಯಬೇಕು. ನಾನು ಸೊಗಸಿಗೆಂದು ಸೆರೆ ಕುಡಿಯತೊಡಗಿದೆ. ದೊಡ್ಡ ದೊಡ್ಡ ಅರಮನೆಗಳನ್ನು ಕಟ್ಟಿಸಿದೆ. ದ್ರಾಕ್ಷೆಯಬಳ್ಳಿಗಳನ್ನು ಬೆಳೆಸಿದೆ. ಉದ್ಯಾನವೊಂದನ್ನು ನಿರ್ಮಿಸಿ ಅದರಲ್ಲಿ ಅವೆಷ್ಟೋಬಗೆಯ ಹಣ್ಣಿನ ಗಿಡಗಳನ್ನು ಹಚ್ಚಿಸಿದೆ. ನೀರಿಗಾಗಿ ಕೆರೆಗಳನ್ನು ಕಟ್ಟಿಸಿದೆ ಅನೇಕ ಸ್ತ್ರೀ ಪುರುಷರನ್ನು ನೌಕರಿಗೆ ಇಟ್ಟುಕೊಂಡೆ. ಜೆರುಸಲೇಮದಲ್ಲಿ ಸಿಗಬಹುದಾದ ಪ್ರಾಣಿಗಳನ್ನೆಲ್ಲಾ ಸಾಕಿದೆ. ಬಹಳಷ್ಟು ಚಿನ್ನ ಬೆಳ್ಳಿಗಳನ್ನು ಸಂಗ್ರಹಿಸಿದೆ. ಲೆಕ್ಕವಿಲ್ಲದಷ್ಟು ಹಾಡುಗಾರರನ್ನೂ ಹಾಡುಗಾತಿಯರನ್ನೂ ನಿಯಮಿಸಿದೆ. ಹಾಡುಬಾರಿಸುವ ಸಾಮಗ್ರಿಗಳನ್ನು ಮೇಳವಿಸಿದೆ. ಇಂತು ನಾನು ದೊಡ್ಡ ಮನುಷ್ಯನಾಗಿ ಬಿಟ್ಟೆ. ಮತ್ತು ಜೆರೂಸಲೇಮದಲ್ಲಾಗಿ ಹೋದ ಮೊದಲಿಗರನ್ನೆಲ್ಲಾ ಮಿಕ್ಕಿ ಮೀರಿದೆ. ನನಗೆ ಬುದ್ಧಿಯು ತುಂಬಾ ಇತ್ತು. ನೋಡಲಿಕ್ಕೆಳಸಿದ್ದನ್ನೆಲ್ಲಾ ತೋರಿಸಿ ಬಿಡುತ್ತಿದ್ದೆ ಕಣ್ಣುಗಳಿಗೆ. ಹೃದಯವು ಭೋಗಿಸಲಿಚ್ಛಿಸಿದ ಆನಂದದಿಂದ ಅದನ್ನು ವಂಚಿಸಲಿಲ್ಲ. ಆದರೆ ನಾನು ನೆರೆಯಿಸಿದ ಈ ಸಾಹಿತ್ಯ ಸಾಮಗ್ರಿಗಳನ್ನೆಲ್ಲಾ ಆಳವಾಗಿ ನಿರುಕಿಸಿದರೆ ವ್ಯಾಕುಲತೆ ಮತ್ತು ವ್ಯರ್ಥತೆ ಇವುಗಳ ಹೊರತು ಮತ್ತೇನೂ ಕಂಡು ಬರಲಿಲ್ಲ.

“ಬುದ್ಧಿವಂತಿಕೆ, ಹುಚ್ಚುತನ, ಮೂರ್ಖತನ ಇವುಗಳ ಅನುಸಂಧಾನ ಮಾಡಿದಾಗ ನನಗೆ ಕಂಡು ಬಂದದ್ದೇನಂದರೆ— ಎಲ್ಲದರ ಕೊನೆಯ ಪರಿಣಾಮವೂ ಒಂದೇ. ನನಗನಿಸಹತ್ತಿತು— ಮೂರ್ಖನಿಗೂ ನನಗೂ ಒದಗುವ ಗತಿಯು ಒಂದೇಯೆಂದಮೇಲೆ, ನಾನು ಅತನಿಗಿಂತ ಹೆಚ್ಚು ಬುದ್ಧಿವಂತ ಹೇಗೆ? ಜಗತ್ತು ಮೂರ್ಖರನ್ನು ಮರೆತು ಬಿಡುವಂತೆ ಬುದ್ಧಿವಂತರನ್ನೂ ಮರೆತು ಬಿಡುತ್ತದೆ. ಇಂದಿರುವ ಮಹತ್ವದ ವಸ್ತು ಒಂದಿಲ್ಲೊಂದು ದಿನ ಮರೆತು ಹೋಗುವುದು ನಿಶ್ಚಯ. ಮೂರ್ಖನು ಸತ್ತು ಹೋಗುವಂತೆ ಬುದ್ಧಿವಂತನೂ ಸತ್ತುಹೋಗುತ್ತಾನೆ. ಅಂತೆ ನನಗೆ ಜೀವನದ ಬಗ್ಗೆ ತಾತ್ಸಾರ ಉಂಟಾಯ್ತು. ಯಾಕೆಂದರೆ ಜಗತ್ತಿನಲ್ಲಿದ್ದ ಪದಾರ್ಥಗಳೆಲ್ಲಾ ಕಷ್ಟಕ್ಕೀಡು ಮಾಡುವಂಥವೇ ಆಗಿವೆ. ನಾನು ಒಟ್ಟು ಗೂಡಿಸಿದ ಸಾಮಗ್ರಿಗಳನ್ನು ಬಿಟ್ಟುಕೊಡಬೇಕಾಗುವದಲಾ ಎಂದು ಹಳಹಳಿಯಾಗತೊಡಗಿತು.

“ ಮನುಷ್ಯನು ನಡಿಸುವ ಈ ಪ್ರಯತ್ನ, ಈ ಕಷ್ಟ ಇವುಗಳಿಂದ ಆತನಿಗೆ ಸಿಗುವದೇನು? ದಿನವೆಲ್ಲಾ ಅಶಾಂತಿಯಲ್ಲಿ ಕಳೆಯುವದು; ರಾತ್ರಿಯಲ್ಲಿಯೂ ಸಮಾಧಾನ ಸಿಗದು. ಪ್ರತ್ಯಕ್ಷದಲ್ಲಿ ಮನುಷ್ಯನಿಗೆ ತಿನ್ನುವುದು, ಉಣ್ಣುವುದು, ಏನಾದರೂ ಮಾಡಿ ಸೊಗಸಾಗಿರೋದು ಇವುಗಳಿಗಿಂತ ಹೆಚ್ಚಿನದಾವುದೂ ಇಲ್ಲ. ಎಲ್ಲವುಗಳ ಪರಿಣಾಮ ಒಂದೇ. ಒಳ್ಳೆಯವನಿರಲಿ ಕೆಟ್ಟವನಿರಲಿ, ಪಾಪಿಯಿರಲಿ, ಪುಣ್ಯವಂತನಿರಲಿ, ಎಲ್ಲರಿಗೂ ಒಂದೇ ಪರಿಣಾಮ. ಆತ್ಮಸಮರ್ಪಣೆ ಮಾಡಿದವನು ಮಾಡಲಾರದವನು, ಸತ್ಕಾರ್ಯನಿರತನೂ, ದುಷ್ಟನೂ, ಆಣೆ ಇಟ್ಟುಕೊಳ್ಳುವವನು- ಇಟ್ಟುಕೊಳ್ಳಲಾರವವನು ಇವರೆಲ್ಲರೂ ಸಮಾನರೇ. ಈ ಆಕಾಶದ ಕೆಳಗೆ ನಡೆಯುತ್ತಿರುವ ಕಾರ್ಯಕಲಾಪಗಳಲ್ಲಿಯ ದೊಡ್ಡ ದೋಷವೆಂದರೆ— ಎಲ್ಲರ ಕೊನೆಯಗತಿಯೂ ಒಂದೇ ಎಂಬುದು. ಮನುಷ್ಯನ ಹೃದಯವು ಪಾಪದಿಂದ ತುಂಬಿದೆ. ಪರಗೆವೇಡಿಯಾಗಿ ಬದುಕಿದ್ದು ಬಳಿಕ ಪರಲೋಕದ ಹಾದಿ. ಜೀವಂತನಿದ್ದವನಿಗೆ ಆಶೆಯುಂಟು. ಯಾಕೆಂದರೆ ಜೀವಂತ ನಾಯಿಯು ಸತ್ತ ಸಿಂಹಕ್ಕಿಂತ ಮಿಗಲು. ಜೀವಂತ ಮನುಷ್ಯನು ‘ ನಾನು ಸಾಯುವೆನೆಂದು ತಿಳಿಯುವನು. ಆದರೆ ಹೆಣಕ್ಕೇನು ಗೊತ್ತು? ಅವನು ಯಾವ ಬಹುಮಾನವನ್ನೂ ಇಚ್ಛಿಸುವದಿಲ್ಲ ಏಕೆಂದರೆ ಸತ್ತವನು ತನ್ನ ಕೆಲಸಗಳನ್ನೇ ಮರೆತು ಬಿಟ್ಟಿರುತ್ತಾನೆ. ಅವನಷ್ಟಕ್ಕೆ ಪ್ರೇಮ, ತಿರಸ್ಕಾರ, ಈರ್ಷೆ ಇವೆಲ್ಲಾ ನಾಶವಾಗಿ ಬಿಟ್ಟಿರುತ್ತವೆ. ಮತ್ತು ಜಗತ್ತಿನಲ್ಲಿ ನಡೆಯುವತ್ತಿರುವುದರಲ್ಲಿ ಆತನ ಸಂಬಂಧ ಉಳಿಯುವದಿಲ್ಲ. ”

ಮೇಲೆ ವಿವರಿಸಿದ ವಿಚಾರಗಳು ಸಾಲೋಮನ್ನನವು.

ಇನ್ನು ಒಬ್ಬ ಭಾರತೀಯ ಮಹಾತ್ಮನ ಕಥೆಯನ್ನಿಷ್ಟು ಕೇಳಿರಿ—

“ತರುಣನೂ, ಸಂತೋಷಚಿತ್ತನಾದ ರಾಜಕುಮಾರನೂ ಆದಂಥ— ರೋಗ-ಮುಪ್ಪು-ಮರಣಗಳ ಕಲ್ಪನೆ ಸಹ ಆಗದಂತೆ ಜೋಕೆಸಲ್ಪಟ್ಟಂಥ ಶಾಕ್ಯಮುನಿಯು ಒಂದು ದಿನ ಬೈಲು ಹವೆಗೆ ಹೊರಟಿದ್ದನು. ಬಾಯಲ್ಲಿ ಹಲ್ಲಿಲ್ಲದ ಒಬ್ಬ ಮುದುಕನ ಮೇಲೆ ಆತನ ದೃಷ್ಟಿ ಬಿತ್ತು, ರಾಜಕುಮಾರ

ನಿಗೆ ಮುಪ್ಪಿನ ಕಲ್ಪನೆಯೇ ಇರಲಿಲ್ಲವಾದ್ದರಿಂದ ಆತನಿಗೆ ತುಂಬಾ ಸೋಜಿಗವೆನಿಸಿತು. ಆತನು ತನ್ನ ಸಾರಥಿಯನ್ನು ಕುರಿತು— ‘ ಈ ಮನುಷ್ಯನು ಇಂಥಾ ಸ್ಥಿತಿಯಲ್ಲೇಕೆ ಇದ್ದಾನೆ ? ’ ಎಂದು ಕೇಳಿದನು. ಸಾರಥಿಯು ಇದಕ್ಕೆ ಪ್ರತಿಯಾಗಿ ಹೇಳಿದ್ದೇನೆಂದರೆ— ‘ ಎಲ್ಲ ಮನುಷ್ಯರಿಗೂ ಇದೇ ಹಾಡು ಕಟ್ಟಿಟ್ಟಿದೆ. ತಾವೂ ಮುಪ್ಪಿನಲ್ಲಿ ಈ ಕಷ್ಟವನ್ನು ಭೋಗಿಸಬೇಕಾಗುವದು. ’ ಈ ಉತ್ತರವು ರಾಜಕುಮಾರನ ಮನಸ್ಸಿನ ಮೇಲೆ ಮಹಾ ಪರಿಣಾಮವನ್ನುಂಟು ಮಾಡಿತು. ತಿರುಗಾಡಲಿಕ್ಕೆ ಹೋಗುವುದೂ ಒಲ್ಲದ್ದಾಯಿತು. ಆತನಿಗೆ ಈ ಸಮಸ್ಯೆಯನ್ನು ಕುರಿತು ವಿಚಾರಿಸೋಣವೆಂದು ಮನೆಗೆ ಮರುಳಲಿಕ್ಕೆ ಸಾರಥಿಗೆ ಅಪ್ಪಣೆ ಕೊಟ್ಟನು. ಆತನು ಏಕಾಂತದಲ್ಲಿ ಹೋಗಿ ಕೆಲಹೊತ್ತು ಯೋಚಿಸಿ ಹೇಗೋ ಸಮಾಧಾನ ಮಾಡಿಕೊಂಡನು. ಬೇರೊಂದು ದಿನ ಮತ್ತೂ ತಿರುಗಾಡಲಿಕ್ಕೆ ಹೊರಟನು. ಈ ಸಲ ಆತನಿಗೆ ಒಬ್ಬ ರೋಗಿಯು ಸಿಕ್ಕನು. ಅರಸು ಮಗನಿಗೆ ಒಮ್ಮೆಲೆ ಆಶ್ಚರ್ಯವಾಯಿತು. ಆತನ ಕೈಕಾಲುಗಳು ಲಟಪಟಸಹತ್ತಿದವು. ಆತನ ಕಣ್ಣಿನ ದೃಷ್ಟಿ ಕುಂಠಿತವಾಗತೊಡಗಿತ್ತು; ಮುಖವು ಕಂದು ಹೋಯ್ತಿತ್ತು. ರಾಜಕುಮಾರನು ರಥವನ್ನು ನಿಲ್ಲಿಸಿ ಕೇಳಿದನು— “ ಇದಕ್ಕೇನು ಕಾರಣವೆಂ”ದು ಉತ್ತರಸಿಕ್ಕಿದ್ದೇನೆಂದರೆ— ‘ ಈತನಿಗೆ ಈಗತಿಯುಂಟಾಗಿದ್ದು ಬೇನೆಯಿಂದ, ಎಲ್ಲರೂ ಬೇನೆಗೀಡಾಗತಕ್ಕವರೇ. ಈಗ ಆರೋಗ್ಯದಿಂದಲೂ, ಸಂತೋಷಚಿತ್ತದಿಂದಲೂ ಇರುವ ರಾಜಕುಮಾರನೂ ನಾಳೆ ಬೇನೆ ಬೀಳಬಹುದು, ಆತನಲ್ಲಿಯು ಇದೇ ಬದಲಾವಣೆ ಆಗಬಹುದು.’ ಇದನ್ನು ಕೇಳಿ ರಾಜಕುಮಾರನ ಮನಸ್ಸಿನಲ್ಲಿ ಅಲೆಗಳೇಳಹತ್ತಿದವು. ಹಾಗೆಯೇ ಅವರು ಮನೆಗೆ ಬಂದರು. ಆತನು ಅಂದಿನಂತೆಯು ಮತ್ತೆ ವಿಚಾರದಲ್ಲಿ ಬಿದ್ದನು. ಮನಸ್ಸು ಹೇಗೋ ಸಮಾಧಾನವಾಯಿತು. ಮೂರನೆಯ ಸಾರೆ ಅಡ್ಡಾಡಲಿಕ್ಕೆ ಹೊರಟನು. ಈ ಸಲ ಆತನು ಒಂದು ಹೊಸ ದೃಶ್ಯವನ್ನು ಕಂಡನು. ಕೆಲಜನರು ಏನೋ ಒಂದು ದೀನಸನ್ನು ಹೊತ್ತುಕೊಂಡು ಹೋಗುತ್ತಿದ್ದುದನ್ನು ಕಂಡನು. ‘ಇದೇನೆಂ’ದು ಕೇಳಿದನು. ಅದಕ್ಕೆ ಸಿಕ್ಕ ಉತ್ತರವೇನೆಂದರೆ—

‘ಇವನೊಬ್ಬ ಮೃತ ಮನುಷ್ಯ.’ ರಾಜಕುಮಾರನು ಕೇಳಿದನು—‘ಮೃತನೆಂದರೇನು?’ ಸಾರಥಿಯು ಮಾರುನುಡಿದಿದ್ದೇನೆಂದರೆ—‘ಈ ಮನುಷ್ಯನಂತೆ ಆಗಿಬಿಡುವುದು.’ ಆಗ ರಾಜಕುಮಾರನು ಸಿದಿಗೆಯ ಬಳಿಗೆ ಹೋಗಿ, ಅದರ ಮುಸುಕು ಎತ್ತಿ ಇಣಿಕಿದನು. “ಇನ್ನು ಇದಕ್ಕೆ ಏನು ಆಗುವದು” ಎಂದು ಕೇಳಿದನು. ಜನರು ಹೇಳಿಕೊಟ್ಟರು— “ಇದನ್ನು ಗೋರಿ ಮರಡಿಯಲ್ಲಿ ಹುಗಿದು ಬಿಡುವರು” ಎಂದು. ‘ಯಾಕೆ?’ ‘ಯಾಕೆಂದರೆ ಈತನಿನ್ನು ಜೀವಂತನಾಗಲಾರನು; ಹೀಗೆ ಹೊರಗಿಟ್ಟರೆ ದುರ್ಗಂಧನೇಳುವದು; ಹುಳಗಳು ಹುಟ್ಟುವವು.’ “ಏನು? ಎಲ್ಲರಿಗೂ ಇದೇ ಪರಿಣಾಮವಾಗುತ್ತದೆಯೆ? ನನಗೂ ಇದೇ ಗತಿಯೇ? ನನ್ನನ್ನೂ ಜನರು ಹುಗಿದುಬಿಡುವರೇ? ನನ್ನಿಂದಲೂ ದುರ್ವಾಸನೆ ಏಳುವದೆ? ನನ್ನನ್ನೂ ಹುಳಗಳುತಿನ್ನುವವೆ?”— “ಹೌದು.” “ಹಾಗಾದರೆ ಮನೆಗೆ ನಡೆ. ನಾನಿನ್ನು ಸೊಗಸಿಗಾಗಿ ಬರಲಾರೆ; ಮತ್ತು ಇನ್ನೆಂದೂ ಹೀಗೆ ಬಯಲು ಹವೆಗೆಂದು ಬರುವದಿಲ್ಲ.”

ಶಾಕ್ಯ ಮುನಿಯು ‘ಜೀವನವು ದುಃಖಮಯ’ವೆಂದು ತೀರ್ಮಾನಿಸಿಕೊಂಡು ಬಿಟ್ಟನು. ಮತ್ತು ತನಗಾಗಲಿ, ಪರರದಾಗಲಿ ಆತ್ಮವು ಶರೀರಬಂಧನದಿಂದ ಬಿಡುಗಡೆ ಹೊಂದಬೇಕೆಂದೂ, ಸತ್ತಮೇಲೆಯೂ ಆತ್ಮವು ಶರೀರ ಬಂಧನದಲ್ಲಿ ಬೀಳಬಾರದೆಂದೂ ಜೀವನದ ಬೇರುಗಳು ಕತ್ತರಿಸಿ ಹೋಗಬೇಕೆಂದೂ ಯಥಾ ಶಕ್ತಿ ಪ್ರಯತ್ನಿಸಿದನು.

ಸಾಕ್ರೆಟೀಸನು ಹೇಳುವದೇನಂದರೆ— ಜೀವನವು ದುಃಖಮಯವೂ ನಿರರ್ಥಕವೂ ಆಗಿದೆ. ಆದ್ದರಿಂದ ಜೀವನವನ್ನು ನಾಶಗೊಳಿಸುವ ಪ್ರಯತ್ನಕ್ಕಿಂತ ಮಿಗಿಲಾದದ್ದು ಯಾವುದೂ ಇಲ್ಲ.

ಶೋಪನ್‌ಹಾರ್ ಹೇಳುತ್ತಾನೆ— ಜೀವನವೆಂದರೆ ಕೆಡುಕಿನ ಬೇರು. ಆದ್ದರಿಂದ ಅದನ್ನು ಪೂರಾ ಕಿತ್ತಿ ಹಾಕುವದರಲ್ಲಿಯೇ ಕಲ್ಯಾಣವಿದೆ.

ಸೋಲೋಮನ್‌ನು ಹೇಳಿದ್ದು— ಜಗತ್ತಿನಲ್ಲಿದ್ದುದೆಲ್ಲಾ ಅಂದರೆ ಮೂರ್ಖತನ ಬುದ್ಧಿವಂತಿಕೆ, ಬಡತನ ಭಾಗ್ಯವಂತಿಕೆ, ಸುಖ ದುಃಖ

ಇವೆಲ್ಲಾ ವ್ಯರ್ಥವಾದುವುಗಳೇ. ಮನುಷ್ಯನು ಸತ್ತು ಹೋಗುತ್ತಾನೆ; ಆ ಮೇಲೆ ಏನೂ ಉಳಿಯುವದಿಲ್ಲ.

ಗೌತಮ ಬುದ್ಧನು ಅಂದದ್ದು— ಕಷ್ಟ ಸಹಿಸಿಕೊಳ್ಳುವುದು, ಶಕ್ತಿಗುಂದುವುದು, ಮುದುಕರಾಗುವುದು, ಸಾಯುವುದು ಇವನ್ನೆಲ್ಲಾ ತಿಳಿದೂ ಬದುಕಿರಬೇಕೆಂದು ಆಶಿಸುವದು ಅಸಂಭವ. ಹೇಗಾದೂ ಮಾಡಿ ಜೀವದಿಂದ ಪಾರಾಗಬೇಕು.

ಈ ಮಹಾ ಮೇಧಾವಿಗಳು ಹೇಳಿದುವನ್ನೇ ಅವರಂಥ ಬೇರೆ ಲಕ್ಷಾವಧಿ ಜನರೂ ಪರಿಶೀಲಿಸಿ ಅನುಭವ ತೆಗೆದುಕೊಂಡು ಹೇಳಿರುತ್ತಾರೆ. ನಾನು ಅನುಭವಿಸಿದ್ದೂ ಆಲೋಚಿಸಿದ್ದೂ ಕೂಡ ಅವನ್ನೆ.

ಶಾಸ್ತ್ರಗಳೊಳಗಿನ ನನ್ನ ತೊಳಲಾಟವು ನನ್ನನ್ನು ನಿರಾಶೆಯ ಕೈಯೊಳಗಿಂದ ತಪ್ಪಿಸುವ ಬದಲು ಅದನ್ನು ಇನ್ನಿಷ್ಟು ಬಲಪಡಿಸಿತು. ಒಂದು ಬಗೆಯ ಜ್ಞಾನವು ಜೀವನದ ಪ್ರಶ್ನಕ್ಕೆ ಉತ್ತರವನ್ನೇ ಕೊಡಲಿಲ್ಲವಾದರೆ ಬೇರೊಂದು ಬಗೆಯದು ನನ್ನ ನಿರಾಶೆಗೇ ಒಪ್ಪಿಗೆಯನ್ನು ಕೊಟ್ಟಿತು. ನಾನು ಬಂದು ಮುಟ್ಟಿದ ಸಿದ್ಧಾಂತವು ನನ್ನ ತಪ್ಪಿನ ಅಥವಾ ನನ್ನ ವ್ಯಾಧಿಗ್ರಸ್ತ ಬುದ್ಧಿಯ ಪರಿಣಾಮವೆಂದು ತೋರಿಸಿಕೊಡದೆ, ತಿರುಗಿ ಪ್ರಬಲವಾದ ಮೇಧಾಶಕ್ತಿಯುಳ್ಳವರ ವಿಚಾರಗಳಿಗೆ ಆ ಸಿದ್ಧಾಂತವು ಸರಿಹೋಗುತ್ತದೆಯೆಂದೂ, ನನ್ನ ವಿಚಾರಗಳು ಸರಿಯಾಗಿಯೇ ಇವೆಯೆಂದೂ ಅದು ತೋರಿಸಿಕೊಟ್ಟಿತು.

ತನ್ನನ್ನು ತಾನು ಮೋಸಗೊಳಿಸುವದರಲ್ಲಿ ಹಿತವಿಲ್ಲ. ಎಲ್ಲವೂ ವ್ಯರ್ಥ! ಇನ್ನೂ ಜನ್ಮಕ್ಕೆ ಬಾರದಿದ್ದವನು ಮಹಾ ಸುಖಿಯು. ಜೀವನಕ್ಕಿಂತ ಮರಣವೇ ಮೇಲು. ಜೀವನದ ಕೈಯೊಳಗಿಂದ ಪಾರಾಗಲುಬೇಕು.

---

# ೭. ಉಂಡಾಡಿಗರ ನಿರರ್ಥಕ ಜೀವನ.

ಶಾಸ್ತ್ರಗಳಿಂದ ನನ್ನ ಪ್ರಶ್ನೆಗಳಿಗೆ ಉತ್ತರ ಸಿಗದೇ ಹೋಗಲು ನಾನು ಮಾನವ ಜೀವನದಲ್ಲಿ ಉತ್ತರವದೊರಕಿಸಲು ತೊಡಗಿದೆ. ನನ್ನ ಸುತ್ತು ಮುತ್ತಲಿನ ನನ್ನ ವರ್ಗದ ಜನರ ರೀತಿ ನಡವಳಿಗಳೆಂತಿವೆ, ಮತ್ತು ನನ್ನ ಹೃದಯದಲ್ಲಿ ನಿರಾಶೆಯನ್ನು ಹುಟ್ಟಿಸಿದ ಪ್ರಶ್ನೆಗಳನ್ನವರು ಯಾವ ಬಗೆಯಿಂದ ಕಾಣುತ್ತಾರೆ? ಇವುಗಳನ್ನರಿತುಕೊಳ್ಳಬೇಕೆಂದು ನಾಲ್ಕೂ ಸುತ್ತಿನ ಜನರನ್ನು ನಿರೀಕ್ಷಿಸ ತೊಡಗಿದೆನು.

ನಾನು ಕಂಡ ನನ್ನ ವರ್ಗದ ಜನರು ಇರುವ ರೀತಿಯಲ್ಲಿ ನಾಲ್ಕು ವಿಧಗಳೆಂದು ತೋರಿತು.

ಮೊದಲನೇ ತರದವರು ಜೀವನ ಸಮಸ್ಯೆಯನ್ನೇ ಅರಿಯರು; ತಿಳಿವು—ಹೊಳಿವು ಇಲ್ಲದೆ ಜೀವನವನ್ನು ಕಳೆಯುತ್ತಿದ್ದಾರೆ. ಈ ತೆರದ ಜನರಲ್ಲಿ— ವಿಶೇಷವಾಗಿ ತರುಣ ಸ್ತ್ರೀಯರ ತಲೆಯಲ್ಲಿ, ಶೋಪನ್ ಹಾರ್, ಸಾಲೋಮನ್, ಮತ್ತು ಬುದ್ಧದೇವ ಮುಂತಾದವರ ಮುಂದೆ ಬಂದ ಪ್ರಶ್ನೆಗಳು ಬರುವದೇ ಇಲ್ಲ. ಅವರಿಗೆ ಘಟಸರ್ಪವೂ ಕಾಣಿಸುವದಿಲ್ಲ; ತಾವು ಜೋತು ಬಿದ್ದ ಗಿಡದ ಬೇರು ಕತ್ತರಿಸುತ್ತಿದ್ದ ಇಲಿಗಳು ಕಾಣಿಸುವದಿಲ್ಲ. ಅವರು ಬರೀ ಜೇನಹನಿಯನ್ನು ನೆಕ್ಕುತ್ತಿದ್ದಾರೆ. ಆದರೆ ಭಯಂಕರವಾದ ಕಾಡುಮೃಗವೂ, ಇಲಿಗಳೂ ಅವರ ಕಣ್ಣಿಗೆ ಬಿದ್ದಾಗ ಜೇನು ನೆಕ್ಕುವುದು ನಿಂತು ಬಿಡುತ್ತದೆ. ಇಂಥವರಿಂದ ನಾವು ಕಲಿಯತಕ್ಕದ್ದೂ ಏನೂ ಇರುವದಿಲ್ಲ.

ಎಪಿಕ್ಯೂರಿಯನ್ ( **Epicurean** ) ರೀತಿಯಲ್ಲಿ ಜೀವಿಸುವವರು ಎರಡನೇ ವರ್ಗದವರು. ಅಂದರೆ ಆನಂದಾನುಭವವಾಗುವ ಪ್ರತಿಯೊಂದು ಸಂಗತಿಯನ್ನು ಒಪ್ಪಿಸುತ್ತಿರುತ್ತಾರೆ; ದುಃಖಪ್ರದ ವಸ್ತುಗಳನ್ನು ತಪ್ಪಿಸುತ್ತಿರುತ್ತಾರೆ. ಇವರು ಭಯಂಕರವಾದ ಕಾಡು ಮೃಗಗಳಿಂದಲೂ, ಇಲಿ

ಗಳಿಂದಲೂ ತಲೆತಪ್ಪಿಸಿಕೊಂಡು, ಸಿಗುವಷ್ಟು ಜೀವನ್ನು ಸವಿಯುವದರಲ್ಲಿ ನಿರತರಾಗಿರುತ್ತಾರೆ. ಬದುಕಿ ಬಾಳುವುದಕ್ಕೆ ಇದಕ್ಕಿಂತ ಉತ್ತಮ ವಾದ ರೀತಿಯೇ ಇಲ್ಲವೆಂದು ಸಾಲೋಮನ್ನನು ಬರೆಯುತ್ತಾನೆ. ಆತನು ಸಾರಿ ಹೇಳುವದೇನಂದರೆ— 'ಜಗತ್ತಿನಲ್ಲಿ ಉಣ್ಣುವದು, ತಿನ್ನುವುದು. ಸೊಗಸಾಗಿರುವುದು ಇವುಗಳಿಗೆ ಸರಿಯಾದದ್ದೊಂದೂ ಇಲ್ಲ.

ಇದೇ ರೀತಿಯಾಗಿ ನನ್ನ ವರ್ಗದ ಬಹು ಜನರು ಜೀವಿಸುತ್ತಿದ್ದಾರೆ. ಆನಂದವಾಗಲಿ ಸುಖವಾಗಲಿ ಲಭಿಸುವುದು ಕಾಕತಾಳೀಯ ನ್ಯಾಯದಿಂದ ಮಾತ್ರವೆಂಬುದನ್ನು ಇಂಥವರು ಮರೆತೇ ಬಿಟ್ಟಿರುತ್ತಾರೆ. ಎಲ್ಲಾ ಜನರು ಸಾಲೋಮನ್‌ನಂತೆ ಸಿರಿವಂತರಾಗಿರಲಾರರು. ಒಬ್ಬನಿಗೆ ಸಾವಿರಾರು ಜನ ಹೆಂಡಿರಿದ್ದರೆ, ಒಬ್ಬ ಹೆಂಡತಿಯೂ ಕೂಡ ಇಲ್ಲದಂಥ ಸಾವಿರಾರು ಜನರೂ ಇರುತ್ತಾರೆ. ಇಂದು ಸಾಲೋಮನ್‌ನಾಗಿದ್ದವನು ನಾಳೆ ಆತನ ಅಡಿಯಾಳಾಗಲಿಕ್ಕೆ ತಕ್ಕವನಾಗಬಹುದು. ಈ ವರ್ಗದವರ ಮಾನಸಿಕ ಆರೋಗ್ಯತೆಯು, ಗೌತಮ ಬುದ್ಧನ ಶಾಂತಿಯನ್ನು ಕೆಡಿಸಿದಂಥ ಸಂಗತಿಗಳ ಕಡೆಗೆ ಅವರ ಲಕ್ಷ್ಯವನ್ನೇ ಹೋಗಗೊಡುವದಿಲ್ಲ. ರೋಗ-ಮುಪ್ಪು-ಮರಣಗಳಿಂದ ಇಂದಿಲ್ಲ ನಾಳೆ ತಮ್ಮ ಸಮಸ್ತ ಸುಖಕ್ಕೆ ಕೊನೆಗಾಣುವದೆಂದು ಅವರು ಯೋಚಿಸುವುದೇ ಇಲ್ಲ.

ಆದರೆ ನಾನು ಈ ವರ್ಗದ ಜನರ ಅನುಕರಣ ಮಾಡಲಿಚ್ಛಿಸಲಿಲ್ಲ. ಅವರು ತಮ್ಮ ಇಂಥ ವಿಚಾರಗಳಿಗೆ ಒಂದು ತತ್ವಜ್ಞಾನದ ಸ್ವರೂಪವನ್ನು ಬೇರೆ ಕೊಡುತ್ತಾರೆ.

ಮೂರನೇ ರೀತಿಯಲ್ಲಿ ನಡೆಯುವ ಮನುಷ್ಯರ ಶಾರೀರಿಕ ಮಾನಸಿಕ ಶಕ್ತಿಗಳಲ್ಲಿ ಯಾವ ವಿಕಾರಗಳೂ ಇರುವುದಿಲ್ಲ. ಅಲ್ಲದೆ ಅವರು ಸಬಲ ಹೃದಯರು. ಜೀವನವು ನಿಸ್ಸಾರವೆಂದೂ, ಅದು ದುಃಖದಿಂದ ತುಂಬಿ ಹೋಗಿದೆಯೆಂದೂ, ಬದುಕಿರುವುದಕ್ಕಿಂತ ಸಾಯುವುದು ಲೇಸೆಂದೂ ಇವರಿಗೆ ಒಮ್ಮೆ ಅನಿಸಿದರೆ ಸಾಕು. ಕೊಡಲಿ ಹಗ್ಗ, ಚಾಕು, ಕೆರೆ, ಉಗಿಬಂಡಿ ಇವುಗಳಲ್ಲೊಂದರ ಸಹಾಯದಿಂದ ತಮ್ಮ ಜೀವನ

ವನ್ನು ಮುಗಿಸಿಕೊಳ್ಳುತ್ತಾರೆ. ನನ್ನ ವರ್ಗದವರಲ್ಲಿ ಹೀಗೆ ಆತ್ಮಹತ್ಯೆ ಮಾಡಿಕೊಳ್ಳುವವರು ಹೆಚ್ಚಾಗಿ ಇರುತ್ತಾರೆ. ಆತ್ಮಹತ್ಯೆ ಮಾಡಿಕೊಳ್ಳುವವರು ಬಹಳ ವಾಡಿ ಹರೆಯದವರಿರುತ್ತಾರೆ. ಯಾಕೆಂದರೆ ಅವರ ಸರ್ವ ಶಕ್ತಿಗಳು ಸರಿಯಾದ ರೀತಿಯಲ್ಲಿರುತ್ತವೆ.

ನನಗೂ ಎಲ್ಲಕ್ಕಿಂತ ಇದೇ ಹಾದಿ ಸರಿಯೆಂದು ತೋರಿತು. ಮತ್ತು ಅವರಂತೆ ನಾನು ಮಾಡಲಿಚ್ಛಿಸಿದೆನು.

ನಾಲ್ಕನೇ ರೀತಿಯು ದುರ್ಬಲಪ್ರಕೃತಿಯವರದು. ಈ ರೀತಿಯಿಂದ ಜೀವಿಸುತ್ತಿರುವವರಿಗೆ ಜೀವನದ ದೋಷಗಳೆಲ್ಲಾ ಒಡೆದುಕಾಣಿಸುತ್ತಿದ್ದರೂ ಇವರಿಗೆ ಆತ್ಮಹತ್ಯ ಮಾಡಿಕೊಂಡು ಬಿಡುವಷ್ಟು ಧೈರ್ಯವಿರುವದಿಲ್ಲ. ತಿದ್ದಿಕೊಳ್ಳುವ ರೀತಿಯೇನಾದರೂ ಹೊಳೆದೀತೆಂಬ ಆಶೆಯಿಂದಲೂ, ಈ ಬಾಳಿನ ಎಡರುಗಳಿಂದ ಕಡೆಗಾಣುವ ಉಪಾಯ ಸಿಕ್ಕರೆ ಅವರಂತೆ ನಡೆದು ನೋಡಬೇಕೆಂತಲೂ ಜೀವನವನ್ನು ಬಿಗಿಹಿಡಿದಿರುತ್ತಾರೆ. ನಾನು ಇದೇರೀತಿಯ ಮನುಷ್ಯರೊಳಗಿನವನು.

ಜೀವಿಸಿರುವುದಕ್ಕೆ ಇವೇ ನಾಲ್ಕು ರೀತಿಗಳು. ಇವುಗಳನು ಬಿಟ್ಟರೆ ನನಗೆ ತಿಳಿಯದು.

ನಾನು ಜೀವನ ಸಮಸ್ಯೆಯನ್ನು ತಿಳಕೊಳ್ಳುವುದರಲ್ಲಿ ಎಲ್ಲೋ ಸ್ವಲ್ಪ ತಪ್ಪುತ್ತಿದ್ದೇನೆಂದು ನನ್ನ ಮನಸ್ಸಿನಲ್ಲಿ ಒಮ್ಮೊಮ್ಮೆ ಸಂಶಯ ಬರುತ್ತಿದ್ದದರಿಂದ ನಾನು ಆತ್ಮಹತ್ಯೆವನ್ನು ಮಾಡಿಕೊಳ್ಳಲಿಲ್ಲವೆಂದು ನೆನಪಿದೆ.

ನನ್ನ ಬುದ್ಧಿಯೇನೋ ಹೇಳುತ್ತಿತ್ತು— ಜೀವನವು ವ್ಯರ್ಥವೆಂದು. ಆದರೆ ವಿಚಾರವೇ ಜೀವನಕ್ಕೆ ಕಾರಣವೆಂದು ತಿಳಿದಮೇಲೆ ನಾನು ದೊಡ್ಡ ತಿರುಗಣೆಯಲ್ಲಿ ಸಿಕ್ಕುಬಿದ್ದಂತಾಯ್ತು. ಹೇಗೆಂದರೆ— ಜೀವನವು ನಿರರ್ಥಕವೆಂದು ನನ್ನ ವಿಚಾರವೇ ನನಗೆ ಹೇಳುತ್ತಿತ್ತು. ಅದರಂತೆ ನನ್ನ ವಿಚಾರವೇ ನನ್ನ ಜೀವನಕ್ಕೆ ಕಾರಣವೆಂದು ಸ್ಪಷ್ಟವಾಗಿ ಕಂಡು

ಬರುತ್ತಿತ್ತು. ಆದರೆ ನಿಜವಾಗಿ ನೋಡಿದರೆ ಜೀವನವೇ ಮುಖ್ಯವಾಗಿದ್ದು, ವಿಚಾರವು ಜೀವನದ ಸಂತಾನವಾಗಿರಲಿಕ್ಕೆ ಬೇಕು.

ನಾನು ಯೋಚಿಸುತ್ತಿದ್ದದ್ದೇನೆಂದರೆ— 'ನಾನು ತಿಳಿಕೊಂಡಂತೆ ಜೀವನವು ನಿರರ್ಥಕವಾಗಿದೆಯಾದರೆ ನಾನಿನ್ನೂ ಏಕೆ ಬದುಕಿದ್ದೇನೆ? ಜನವೆಲ್ಲಾ ಏಕೆ ಇನ್ನೂ ಬದುಕಿ ಬಾಳುತ್ತಲಿವೆ? ಜಗತ್ತಿನಲ್ಲೆಲ್ಲಾ ಶೋಪನ್ ಹಾರ್ ಮತ್ತು ನಾನೊಬ್ಬ ಹೀಗೆ ಇಬ್ಬರೇ ಜ್ಞಾನಿಗಳೇನು? ಮತ್ತು ಉಳಿದೆಲ್ಲ ಜಗತ್ತು ಮೂಢವಾಗಿದೆಯೇನು?

ಬದುಕಿರುವುದು ಮೂರ್ಖತನವೆಂದು ಕಂಡುಕೊಳ್ಳುವುದೊಂದು ಸುಲಭವಾದ ಕೆಲಸ. ಸಾಮಾನ್ಯರಲ್ಲಿ ಸಾಮಾನ್ಯನೂ ಇದನ್ನು ತಿಳಿಕೊಳ್ಳಬಲ್ಲನು. ಆದರೂ ಕೋಟ್ಯವಧಿ ಜನರು ಬದುಕಿರುವುದಕ್ಕೆ ಇದ್ದಾರೆ. ಮತ್ತು ಅವರಿಗೆ ಜೀವನದಲ್ಲಿ ಯಾವಕೊರತೆಯೂ ಅನಿಸುವದಿಲ್ಲ.

ನನಗೆ ಜ್ಞಾನೋಪಾರ್ಜನದಿಂದಲೂ ವಿದ್ವಾಂಸರ ಸಂಗದಿಂದಲೂ. ಗೊತ್ತಾದುದೇನೆಂದರೆ— ಜಗತ್ತಿನಲ್ಲಿ ಪ್ರತಿಯೊಂದು ಸಂಗತಿಯು ನಿಯಮಬದ್ಧವಾಗಿದೆ. ಆದರೆ ಜಗತ್ತಿನಲ್ಲಿದ್ದ ಅಸಂಖ್ಯ ಸಾಮಾನ್ಯರಿಗೆ ಇಂಥದೊಂದು ಮಾತು ಇದ್ದುದೂ, ಇಲ್ಲದ್ದೂ ಕೂಡ ಗೊತ್ತೇ ಇಲ್ಲ. ಮತ್ತು ಅವರಿಗೆ ಬಾಳುವೆಯಲ್ಲಿ ಯಾವಕೊರತೆಯೂ ಅನಿಸುವದಿಲ್ಲ.

ಯಾವದೋ ಒಂದು ಮಾತು ನನ್ನ ತಿಳುವಳಿಕೆಗೆ ನಿಲುಕದಿರಬಹುದೆಂದು ತರ್ಕಿಸಿದೆ. ವಸ್ತುವಿನ ಪರಿಚಯವೇ ಇಲ್ಲದವನಿಗೆ ಆ ವಸ್ತುವು ಕೆಟ್ಟದೆಂದೂ ಅಯೋಗ್ಯವೆಂದೂ ತೋರುವುದು ಸಹಜವೇ. ಸಾರಾಂಶ ಇಷ್ಟೇ— ಸಾಮಾನ್ಯವಾಗಿ ಮಾನವಕೋಟಿಯು ಜೀವನದ ಅರ್ಥವನ್ನು ಅರಿತುಕೊಂಡಿರುವಹಾಗೆ ಬಾಳಿ ಬದುಕುತ್ತಲಿದೆ. ಅದರೆ ಅದು ಅರಿತುಕೊಂಡಿರಲೂ ಬಲ್ಲದು. ಇಲ್ಲದಿದ್ದರೆ ಬದುಕಿರಲೇ ಆಗದು. ಹೀಗಿದ್ದು ನಾನೊಬ್ಬನು ಮಾತ್ರ ಅನ್ನುತ್ತಿದ್ದೇನೆ— ಜೀವನವು ನಿಸ್ಸಾರವೆಂದು.

ಹೇಗೆ ಬದುಕಿಬಾಳಬೇಕೆನ್ನುವುದೇ ನಿನಗೆ ತಿಳಿಯಲೊಲ್ಲದಾದರೆ ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ ನಿನಗಾವ ತಡೆಯೂ ಇಲ್ಲ. ಒಟ್ಟಾರೆ

ಜೀವನವು ನೀರಸವೆನಿಸಿದರೆ ಆತ್ಮಹತ್ಯೆ ಮಾಡಿಕೊ. ಆಗ ಎಲ್ಲ ಸಂದೇಹ
ಗಳು ದೂರವಾಗುವವು. ಅಲ್ಲದೆ ವಾದವಿವಾದ ಮಾಡುವುದು, ಬರೆಯೋದು
ಮುಂತಾದ ಯಾವುದರ ಆಗತ್ಯವೂ ಉಳಿಯದು. ನಿನ್ನ ನೆರೆಯವರೆಲ್ಲರೂ
ಸೊಗಸಿನಲ್ಲಿದ್ದಾರೆ. ನಿನಗೆ ಅದು ಒಲ್ಲದ್ದಾದರೆ— ದಯಮಾಡಿಸು.

ಆತ್ಮಹತ್ಯೆಯ ಆವಶ್ಯಕತೆ ತೋರುತ್ತಿದ್ದರೂ ಹೃದಯದೌರ್ಬಲ್ಯದ
ಸಲುವಾಗಿ ತಮ್ಮ ಜೀವಕೊಡಲಿಕ್ಕಾಗದಂಥ ನಿರ್ಬಲ ಹಾಗು ಮೂರ್ಖ
ಮನುಷ್ಯರೊಳಗಿನವ ನಾನು. ನನ್ನ ಬುದ್ಧಿಯು ನನ್ನಲ್ಲಿ ಜೀವನದ
ಆವಶ್ಯಕತೆಯ ನಿರ್ಧಾರವನ್ನುಂಟು ಮಾಡಲಿಲ್ಲ. ಆದರೆ ಬಾಳಿ ಬದು
ಕುವ ಕೋಟಿಗಟ್ಟಲೆ ಜನರು, ಜೀವನದಲ್ಲೇನೋ ಅರ್ಥವಿದೆಯೆಂದೂ,
ಬದುಕಿರುವುದು ಆವಶ್ಯಕವೆಂದೂ ತಿಳಕೊಂಡಿರುತ್ತಾರೆ.

ಮಾನವಜೀವನವು ಆರಂಭವಾದಾಗಿನಿಂದ ಇಂದಿನವರೆಗೆ ಮನು
ಷ್ಯನು ಜೀವನಕ್ಕೆ ಅರ್ಥವನ್ನು ಹಚ್ಚಿಕೊಂಡು ಬಾಳಿಬದುಕುತ್ತ ಬಂದಿ
ದ್ದಾನೆ. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ನನಗೆ ಎತ್ತ ನೋಡಿದರೂ
ಪೂರ್ವಿಕರ ಜ್ಞಾನ ಮತ್ತು ಸಂಶೋಧನೆಯ ಫಲ ಇದೇ ಕಂಡು ಬರುತ್ತದೆ
ಜೀವನವು ನಿರರ್ಥಕವೆಂದು ಸಿದ್ಧಗೊಳಿಸಿದ ನನ್ನ ಮಾನಸಿಕ ಶಕ್ತಿಯು
ಕೂಡ ಆ ಪೂರ್ವಿಕರ ವಿಚಾರಸಂಶೋಧನೆಗಳ ಫಲವೆ. ನಾನು ಹುಟ್ಟಿದ್ದೂ,
ಬೆಳೆದದ್ದೂ, ಅವರಿಂದಲೇ. ಅವರೇ ನೆಲವನ್ನಗೆದು ಧಾತುಗಳನ್ನು ಹುಡುಕಿ
ತೆಗೆದರು; ಅಡವಿಗಳನ್ನು ನಾಡುಮಾಡುವುದನ್ನು ಕಲಿಸಿದರು. ಆಕಳು-
ಕುದುರೆಗಳನ್ನು ಸಾಕಿದವರೂ ಅವರೇ. ಬೀಜಗಳನ್ನೂರುವುದನ್ನೂ
ಅವರೇ ಕಲಿಸಿದರು. ಇನ್ನೊಬ್ಬರೊಡನಿರಲಿಕ್ಕೆ ನಿಯಮತೋರಿಸಿಕೊಟ್ಟ
ವರು ಅವರೇ. ನನ್ನ ವಿಚಾರಶಕ್ತಿಯು ಅವರು ಕೊಟ್ಟದ್ದೇ. ನಾನು ಅವರಿಂದ
ಉಂಟಾಗಿದ್ದೇನೆ; ನಾನವರ ಶಿಷ್ಯ. ಆದರೂ ನಾನು ಪೂರ್ವಿಕರ ಜೀವನವ
ತಿಳಿಗೇಡಿತನದ್ದಾಗಿತ್ತೆಂದು ಸಿದ್ಧಮಾಡಿಕೊಂಡಿರುವೆನಲ್ಲಾ! ಈಗ ಲಕ್ಷ್ಯಕ್ಕೆ
ಬಂತು, ಏನಂದರೆ— ನನ್ನ ತಿಳುವಳಿಕೆಯಲ್ಲಿ ಏನೋ ತಪ್ಪು ಇದೆ. ಆದರೆ
ಎಲ್ಲಿ ಆಗಿದೆಯೆಂಬುದನ್ನು ಕಂಡು ಕೊಳ್ಳುವದಕ್ಕೆ ಆಗಲಿಲ್ಲ ನನಗೆ.

# ೮. ಸಾಮಾನ್ಯರ ಸಾರ್ಥಕ ಜೀವನ.

ಈಗ ನಾನು ಹೆಚ್ಚುಕಡಿಮೆ ಶಾಸ್ತ್ರೀಯವಾಗಿ ಹೇಳಿಕೊಡುತ್ತಿರುವ ಶಂಕೆಗಳನ್ನು ಆಗ ಚೆನ್ನಾಗಿ ವಿವರಿಸಲಿಕ್ಕೆ ನನಗೆ ಬರುತ್ತಿರಲಿಲ್ಲ. ನನಗೆ ಜೀವನವು ನಿರರ್ಥಕವಾದದ್ದೆಂದು ಸ್ಪಷ್ಟವಾಗಿತ್ತು. ಅವರಂತೆ ಜಗತ್ತಿನ ಮಹಾಮೇಧಾವಿಗಳದೂ ಇದಕ್ಕೆ ಅನುಮೋದನವಿದ್ದಿತು. ಆದರೂ ನನ್ನ ತರ್ಕದಲ್ಲೇನೋ ತಪ್ಪು ಇದೆಯೆಂದು ನನಗೆ ತೋರಹತ್ತಿತು. ನನ್ನ ಸಿದ್ಧಾಂತದಲ್ಲೇ ತಪ್ಪು ಇದೆಯೋ ಅಥವಾ ಸಂಶಯಗಳೇ ಸರಿಯಾಗಿಲ್ಲವೋ ಎಂಬುದು ತಿಳಿಯದಂತಾಯ್ತು. ನನ್ನ ಸಿದ್ಧಾಂತಗಳು ಸಯುಕ್ತಿಕವಾಗಿವೆಯೆಂದೆನಿಸಿದರೂ ಅವು ಸಮಾಧಾನಕಾರಕವಾಗಿವೆಯೆಂದು ಅನಿಸುತ್ತಿರಲಿಲ್ಲ. ನನ್ನ ವಿಚಾರಗಳು ಆತ್ಮಹತ್ಯವನ್ನು ಮಾಡಿಕೊಂಡೇ ಬಿಡುವಂತೆ ಎಂದೂ ನನ್ನನ್ನು ಬಲವಂತಪಡಿಸಲಿಲ್ಲ. ನಿಜವಾಗಿ ಈ ತರ್ಕವೆಂಬುದರ ಹೊರತು ಇನ್ನಾವುದೋ ಒಂದು ವಸ್ತುವು ನನ್ನೊಳಗಿದ್ದು ತನ್ನ ಕೆಲಸವನ್ನು ಮಾಡುತ್ತಲಿದ್ದಿತು. ಆ ಶಕ್ತಿಗೆ ನಾನು 'ಜೀವನದ ಸಂವಿತ್ತು' (**Consciousness of Life**) ಎಂದು ಹೆಸರಿಡುವೆನು. ಈ ಶಕ್ತಿಯೇ ನನ್ನ ಲಕ್ಷ್ಯವನ್ನು ಹೀಗೆ ಬೇರೆ ಕಡೆಗೆ ಹೊರಳಿಸಿತು. ಅದು ನನಗೆ ಮನವರಿಕೆ ಮಾಡಿಕೊಟ್ಟಿದ್ದೇನೆಂದರೆ— ಮಾನವಕೋಟಿಯೆಂದರೆ ನಾನಾಗಲಿ, ನನ್ನಂಥ ಬೇರೆ ಕೆಲ ನೂರು ಜನರಾಗಲಿ, ಇಷ್ಟೇ ಅಲ್ಲ. ಹಾಗೂ ನಾನು ಮಾನವಕೋಟಿಯ ಜೀವನದ ಬಗೆಗೆ ಏನೂ ಅರಿಯದವನಾಗಿದ್ದೇನೆಂಬುದೂ ನನಗೆ ತಿಳಿಯಿತು.

ನನ್ನ ವರ್ಗದವರಾದ ಅಲ್ಪಸಂಖ್ಯಾಕ ಜನರ ಬಗ್ಗೆ ವಿಚಾರಿಸಿದಾಗ ನನಗೆ ಅವರಲ್ಲಿ ಕಂಡ ಪ್ರಕಾರಗಳು ನಾಲ್ಕು. ಅವರು, ಜೀವನದ ಸಮಸ್ಯೆಯನ್ನು ಎಳ್ಳಷ್ಟೂ ಅರಿಯದವರು, ಹಗಲಿರುಳೆನ್ನದೆ ಭೋಗವಿಲಾಸದಲ್ಲಿ ನಿಮಗ್ನರಾದವರು, ತಮ್ಮನ್ನು ತಾವು ಕೊಂದುಕೊಳ್ಳುವವರು ಮತ್ತು ಆತ್ಮಹತ್ಯದ ವಿಚಾರ ಮಾಡಿಯೂ ತಮ್ಮ ದೌರ್ಬಲ್ಯದ

ಮೂಲಕ ಹಾಗೆ ಮಾಡಿಕೊಳ್ಳಲಿಕ್ಕಾಗದೆ ಹೇಗೋ ಕಾಲವನ್ನು ತಳ್ಳುತ್ತಾ ಇದ್ದವರು. ಇದರ ಹೊರತು ನಾನು ಬೇರೆ ಕಾಣೆನು. ಸಮಸ್ತ ಮಾನವಕೋಟಿಯೆಂದರೆ ಇಂಥ ಸ್ವಲ್ಪ ಜನರಾದ ಕಲಿತವರೂ, ಸಿರಿವಂತರೂ ಮತ್ತು ಉಂಡಾಡಿಗರು ಇವರೇ ಹೊರತು ಉಳಿದ ಜನ ಸಾಮಾನ್ಯರಿಲ್ಲ ದನಗಳೋ ಆಗಿದ್ದಾರೆಂದು ನನಗಾಗ ತೋರುತ್ತಲಿದ್ದಿತು.

ಈ ಮಾತು ಈಗ ಎಷ್ಟೋ ಆಶ್ಚರ್ಯಕರವಾಗಿಯೂ ಅಸಂಭವವಾಗಿಯೂ, ಅಯೋಗ್ಯವಾಗಿಯೂ ತೋರಬಲ್ಲವೆಂಕೆ: ಆದರೆ ಒಂದಾನೊಂದುಕಾಲಕ್ಕೆ ನಾನು ಎಣಿಸಿದ್ದೇನೆಂದರೆ— ಸಾಲೋಮನ್, ಶೋಪನ್‌ಹಾರ್, ಮತ್ತು ನಾನು ಹೀಗೆ ಮೂವರದೇ ನಿಜವಾದ ಹಾಗೂ ಸ್ವಾಭಾವಿಕವಾದ ಜೀವನ; ಇತರರದು ಹಾಗಲ್ಲ. ಆ ಕಾಲದಲ್ಲಿ ನಾನು ಗರ್ವದಿಂದ ಬಿಗಿದು ಹೋಗಿದ್ದೆನು. ಸಾಲೋಮನ್, ಶೋಪನ್‌ಹಾರ್, ಮತ್ತು ನಾನು ಇಷ್ಟು ಬಿಟ್ಟರೆ ಬೇರೆ ಜನರಾರೂ ಜೀವನದ ಪ್ರಶ್ನವನ್ನೇ ನಿಶ್ಚಿತಪಡಿಸಿಕೊಂಡಿಲ್ಲವೆಂದು ತಿಳಿದು ಕೊಂಡಿದ್ದೆನು.

ನನ್ನ ವರ್ಗದವರೂ, ನನ್ನ ಯೋಗ್ಯತೆಯವರೂ ಬಹುಶಃ ಮಾಡುತ್ತಬಂದ ಹುಚ್ಚುತನವನ್ನು ನಾನೂ ಬಹಳ ದಿನಗಳ ವರೆಗೆ ನಡಿಸಿದೆನು. ಆದರೆ ಹೇಳಿಕೊಳ್ಳುವಂಥ ಮಾತೊಂದೇನೆಂದರೆ— ದುಡಿಯುವ ಜನರ ವಿಷಯಕ್ಕೆ ನನ್ನ ಹೃದಯದಲ್ಲಿ ಪ್ರಗಾಢವಾದ ಪ್ರೇಮವಿತ್ತು. ನಾವು ನಿರ್ಧರಿಸಿದಂತೆ ಅವರು ಮೂರ್ಖರಾಗಿಲ್ಲವೆಂದು ನನಗೆ ಹಿಂದಿನಿಂದ ತಿಳಿದು ಬಂತು. ಮತ್ತೇನೆಂದರೆ— ಜೀವನದ ಪ್ರಶ್ನವನ್ನು ಬಿಡಿಸಬೇಕೆನ್ನುವವನು ಆತ್ಮಹತ್ಯೆಮಾಡಿಕೊಳ್ಳುವ ಹಾಗೂ ಜೀವನಕ್ಕೆ ಎರವಾಗುವ ಜನರನ್ನು ಕಣ್ಣೆತ್ತಿ ನೋಡಬಾರದು. ತಿರುಗಿ ಕೇಳಿದರೆ, ಯಾರು ತಮ್ಮ ಜೀವನವನ್ನು ತಮಗೆ ಬಾಳಿಬದುಕುವುದಕ್ಕೆ ತಕ್ಕುದನ್ನಾಗಿ ಮಾಡಿಕೊಂಡಿದ್ದಾರೋ, ಹಾಗೂ ಯಾರು ತಮ್ಮ ಮತ್ತು ನಮ್ಮ ಜೀವನದ ಹೊರೆಯನ್ನು ಎತ್ತಿಹಿಡಿದಿದ್ದಾರೋ ಅಂಥ ಅಶಿಕ್ಷಿತರಾದ ಬಡ ಜನರ ಜೀವನವನ್ನು ನಿರೀಕ್ಷಿಸತಕ್ಕದ್ದು. ಅದರಂತೆ ಗತಿಸಿಹೋದ

ಹಾಗೂ ಬದುಕಿರುವ ಈ ಅಸಂಖ್ಯ ಸರಳ ಜನರನ್ನು ಕುರಿತು ಈಗ ಆಲೋಚಿಸತೊಡಗಿದೆನು. ನನ್ನ ತಪ್ಪು ನನಗೆ ಹೊಳೆಯಿತು. ನಾನು ಪುಟ್ಟಿಪೂರಾ ಮರೆತು ಬಿಟ್ಟ ಈ ಜನರು ಮೊದಲು ಹೇಳಿದ ನನ್ನ ವರ್ಗದ ಜನತೆಯ ನಾಲ್ಕು ವಿಭಾಗಗಳಲ್ಲಿ ಯಾವುದರೊಳಗೂ ಸೇರಲಾರರು. ಈ ಜನರು ಜೀವನ ಸಮಸ್ಯೆಯನ್ನರಿಯದವರ ವರ್ಗದಲ್ಲಿ ಏಕೆ ಸೇರುವದಿಲ್ಲವೆಂದರೆ— ಇವರಲ್ಲಿ ಈ ಸಮಸ್ಯೆಗೆ ಸಮಾಧಾನಕರವಾದ ಉತ್ತರವಿದೆ. ಭೋಗವಿಲಾಸವನ್ನಲ್ಲದೆ ಇನ್ನಾವುದನ್ನೂ ಪರಾಮರಿಸದ ಜನರಲ್ಲಿಯೂ ಇವರನ್ನು ಗಣಿಸಲಿಕ್ಕಾಗದು. ಏಕೆಂದರೆ ಇವರ ಜೀವನವು ಯಾವಾಗಲೂ ವಿಪತ್ತುಗಳಿಂದ ತುಂಬಿದ್ದೇ ಆಗಿರುತ್ತದೆ. ಆದರೆ ಅವರಲ್ಲಿಯೇ ಆನಂದದಿಂದ ಇರುತ್ತಾರೆ. ಇನ್ನು, ಕೊಂದುಕೊಳ್ಳುವವರಲ್ಲಿಯೂ, ತಮ್ಮ ಇಚ್ಛೆಗೆ ವಿರುದ್ಧವಾಗಿ ಜೀವವನ್ನು ಹಿಡಿದುಕೊಂಡಿರುವವರಲ್ಲಿಯೂ ಇವರ ಸಮಾವೇಶವು ಆಗಲಾರದು. ಏಕೆಂದರೆ ಇವರು ತಮ್ಮ ಜೀವನದ ಪ್ರತಿಯೊಂದು ಕಾರ್ಯದ ( ಸಾವಿನದೂ ಕೂಡ ) ಅರ್ಥವನ್ನು ತಿಳಿದುಕೊಂಡಿರುತ್ತಾರೆ. ಆತ್ಮಹತ್ಯವನ್ನಂತೂ ಮಹಾಪಾಪವೆಂದು ಬಗೆಯುತ್ತಾರೆ. ಹೀಗೆ ಜೀವನದ ರಹಸ್ಯವನ್ನರಿತ ಈ ಜನರನ್ನು ನಾನು ಲಕ್ಷಿಸದೆ ಹೋದೆನಲ್ಲದೆ ತಿರುಗಿ ತಿರಸ್ಕಾರದೃಷ್ಟಿಯಿಂದ ಕಂಡೆನೆಂದು ತೋರಹತ್ತಿತು. ಬರೇ ಬುದ್ಧಿಯು ಜೀವನದ ತೊಡಕನ್ನು ಬಿಡಿಸಲಾರದೆಂದೂ, ಯಾವ ತರ್ಕವಿತರ್ಕಗಳಿಲ್ಲದೆ ಮಡಿದುಂಡು ಜೀವಿಸುವವರೇ ಜೀವನದ ಅರ್ಥವನ್ನು ತಿಳಿದಿದ್ದಾರೆಂಬುದು ಸರಿಯಾದ ಮಾತೆಂದೂ ನನಗಾಗ ಗೊತ್ತಾಯ್ತು.

ಸುಶಿಕ್ಷಿತರೂ ಘನವಿದ್ವಾಂಸರೂ ಹೇಳುವ ವಿಚಾರ ಪ್ರೂತಜ್ಞಾನವೆಂಬುದು ಜೀವನದ ಅರ್ಥವನ್ನು ಅಲ್ಲಗಳೆಯುತ್ತದೆ. ಆದರೆ ಸಾಮಾನ್ಯ ಜನಜಂಗುಳಿಯಿಂದ ತುಂಬಿದ ಸಮಸ್ತ ಮಾನವಕೋಟಿಯು ಅಯುಕ್ತಿಕ ಜ್ಞಾನದಿಂದಲೇ ಜೀವನದ ಅರ್ಥವನ್ನು ದೊರಕಿಸಿಕೊಳ್ಳುತ್ತದೆ. ಈ ನಿರ್ವಿಚಾರದ ಜ್ಞಾನವೆಂದರೆ ಶ್ರದ್ಧೆಯೇ. ಇದನ್ನು ನಾನು ಅಲ್ಲಗಳೆಯುವಂತಿರಲಿಲ್ಲ. ಸಾಮಾನ್ಯಜನರ ದೇವರ ಕಲ್ಪನೆಗಳನ್ನೂ, ಆರು ದಿನ

ಗಳಲ್ಲಿ ಜಗತ್ತಿನ ಉತ್ಪತ್ತಿಯಾಯಿತೆಂಬ ಕಥೆಯನ್ನೂ ನಮ್ಮ ಬುದ್ಧಿಯು ಒಪ್ಪಿಕೊಳ್ಳಲಿಕ್ಕಿಲ್ಲವಾದರೂ ಆವರು ಮಾತ್ರ ಇಂಥವುಗಳನ್ನು ಕೂಡ ನಂಬುತ್ತಿರುವುದುಂಟು. ಇರಲಿ.

ಈ ಸಮಯಕ್ಕೆ ನನ್ನ ಸ್ಥಿತಿಯು ಭಯಾವಹವಾಗಿದ್ದಿತು. ತಾರ್ಕಿಕ ಬುದ್ಧಿಯಿಂದ ಜೀವನವು ನಿರರ್ಥಕವೆಂದು ಮಾತ್ರ ಸಿದ್ಧವಾಗುತ್ತದೆ. ಆದರೆ ಆ ಜನರ ಶ್ರದ್ಧೆಯು ತೋರಿಸಿಕೊಡುವುದೇನಂದರೆ— ಜೀವನ ಸಮಸ್ಯೆಯನ್ನು ಬಿಡಿಸುವುದರಲ್ಲಿ ತರ್ಕಕ್ಕೆ ತೀರ ತುಸು ಮಾತ್ರ ಸ್ಥಳವಿದೆ. ಅಂತೂ ನನ್ನ ಜೀವನವು ನನಗೆ ಬಾಳಿಬದುಕಲು ತಕ್ಕುದಾಗಬೇಕಾದರೆ ನನ್ನ ಮಾರ್ಗದರ್ಶಕವಾಗಿರುವ ಬುದ್ಧಿಶಕ್ತಿಯನ್ನು ಒತ್ತಟ್ಟಿಗೆ ಬದಿಗಿರಿಸ ಬೇಕಾಗುವದೆಂದೆನಿಸಿತು.



# ೯. ವಿಚಾರ ಮತ್ತು ಶ್ರದ್ಧೆ.

ನಾನೊಂದು ದೊಡ್ಡ ಪೇಚಾಟದಲ್ಲಿ ಸಿಕ್ಕುಬಿದ್ದೆ. ನನಗೆ ಒಂದ-ಕ್ಕೊಂದು ವಿರುದ್ಧವಾದ ಎರಡು ಮಾತುಗಳು ತಿಳಿದು ಬಂದವು. ಒಂದು ಮಾತು ಯಾವುದೆಂದರೆ— ನಾನು ತೀರ ಸಯುಕ್ತಿಕವೆಂದು ( Rational ) ತಿಳಿದುಕೊಂಡಿದ್ದ ಸಂಗತಿಯು ನಾನು ತಿಳಿದುಕೊಂಡಷ್ಟು ಸಯುಕ್ತಿಕ ವಿರಲಿಲ್ಲ. ಅದರಂತೆ ತೀರಾ ಅಯುಕ್ತಿಕವೆಂದು ( Irrational ) ತಿಳಿಕೊಂಡು ಬಿಟ್ಟಿದ್ದ ಸಂಗತಿಯು ನಾನು ಕಲ್ಪಿಸಿದಷ್ಟು ಅಯುಕ್ತಿಕ ವಾಗಿರಲಿಲ್ಲ. ನನ್ನ ವಿಚಾರವಾದದ ಕೋಟಿಕ್ರಮದ ಮಾರ್ಗವನ್ನು ಸತ್ಯವೆಂದು ಸ್ಥಾಪಿಸಲಾರಂಭಿಸಿದೆನು.

ನನಗೆ ವಿಚಾರವಾದದ ಮಾರ್ಗವು ತೀರ ಸರಿಯಾದುದೆಂದು ತೋರಿತು. ಜೀವನವು ಶೂನ್ಯವಾಗಿದೆಯೆಂಬುದೇ ಅದರ ಮಥಿತಾರ್ಥವು. ಆದರೆ ಇದರಲ್ಲೊಂದು ತಪ್ಪು ನನ್ನ ಲಕ್ಷಕ್ಕೆ ಬಂತು. ನನ್ನ ವಿಚಾರವು ನನ್ನ ಪ್ರಶ್ನೆಗೆ ಅನುಸಾರವಾಗಿಲ್ಲದುದೇ ಆ ತಪ್ಪೆಂಬುದು.

ಜೀವನಸಮಸ್ಯೆಗೆ ಸಂಬಂಧವಾದ ಪ್ರಶ್ನೆಗಳಿಗೆ ಯಾವ ಪ್ರಕಾರದ ಉತ್ತರ ದೊರೆತರೂ ನನಗೆ ಸಮಾಧಾನವಾಗಲಾರದೆಂದು ಅನಿಸಿತು. ಸುಲಭವಾಗಿ ತೋರುತ್ತಿದ್ದ ಪ್ರಶ್ನವು ಸುಲಭವಾಗರಲಿಲ್ಲ. ಅದನ್ನು ಬಿಡಿಸುವದಕ್ಕೆ ಸಾಂತವನ್ನು ಅನಂತದ ನಿಯಮಗಳಿಂದ ವಿಚಾರಿಸ ಬೇಕಾಗುತ್ತದೆ.

ನಾನು ನನ್ನ ಮನಸ್ಸಿಗೆ ಕೇಳುತ್ತಿದ್ದದ್ದೇನಂದರೆ— “ಕಾಲ ಕಾರಣ ಸ್ಥಾನಗಳನ್ನು ಮೀರಿ ನನ್ನ ಜೀವನಕ್ಕೆ ಏನು ಅರ್ಥವುಂಟು?’ ಆದರೆ ನಾನು ಉತ್ತರವನ್ನಿತ್ತದ್ದು ಬೇರೆ ಪ್ರಶ್ನೆಗೆ. ಆ ಪ್ರಶ್ನೆಯಿದು— “ಸ್ಥಾನ, ಕಾಲ, ಕಾರಣಗಳ ಅಂತರ್ವರ್ತಿಯಾದ ನನ್ನ ಜೀವನ

ಅರ್ಥವೇನು ? " ಅದೆಷ್ಟೋ ಪರಿಶ್ರಮದಿಂದಲೂ, ಆಳವಾದ ವಿಚಾರ ದಿಂದಲೂ, ಇದಕ್ಕೆ ದೊರೆತ ಉತ್ತರವಿಷ್ಟೆ— " ಏನೂ ಇಲ್ಲ. "

ನನ್ನ ತರ್ಕವಿತರ್ಕಗಳಿಂದ ನಾನು ಸಾಂತದೊಡನೆ ಸಾಂತವನ್ನೂ, ಅನಂತದೊಡನೆ ಅನಂತವನ್ನೂ ತುಲನೆಮಾಡಿ ನೋಡತೊಡಗಿದೆ. ಅದರಿಂದ ಹೊರಟ ಅನಿವಾರ್ಯವಾದ ಸ್ಪಷ್ಟ ಸಿದ್ಧಾಂತವೇನೆಂದರೆ— ಶಕ್ತಿಯು ಶಕ್ತಿಯೇ, ಜಡವು ಜಡವೇ, ಅನಂತವು ಅನಂತವೇ, ಸಂಕಲ್ಪವು ಸಂಕಲ್ಪವೇ, ಅಭಾವವು ಅಭಾವವೇ. ಗಣಿತ ಶಾಸ್ತ್ರದಲ್ಲಿ 'ಅ' ಅಕ್ಕೂ, 'ಕ್ಷ' ಕ್ಷಕ್ಕೂ, ಶೂನ್ಯವು ಶೂನ್ಯಕ್ಕೂ ಸಮಾನ ವಾಗಿರುವಂತೆ ಇದೂ ಕೂಡ ಹಾಗೆಯೇ ಇದೆ. ಗಣಿತ ಶಾಸ್ತ್ರದ ನಿಯಮದಂತೆ— " ಸರಿಯಾದ ವಸ್ತುಗಳು ಒಂದಕ್ಕೊಂದು ಸಮಾನ ವಾಗಿರುತ್ತವೆ. "

'ಡಿಸ್ಕಾರ್ಟಿಸ್'ನ ಪದ್ಧತಿಯಂತೆ ಯಾವುದನ್ನು ತಿಳಿದುಕೊಳ್ಳ ಬಯಸಿದರೂ ಎಲ್ಲಕ್ಕಿಂತ ಮೊದಲು ನಾವು ಅದಕ್ಕೆ ಸಂಬಂಧಿಸಿದ ಎಲ್ಲಾ ಮಾತುಗಳನ್ನೂ ಸಂದೇಹ ದೃಷ್ಟಿಯಿಂದ ನೋಡಲಿಕ್ಕೆ ಬೇಕು. ನಂಬುಗೆಯ ಗ್ರಹಿಕೆಗಳ ಕೆಲಸವಿಲ್ಲ. ಪ್ರತಿಯೊಂದು ಪರಿಶೀಲನದಲ್ಲಿ ಅನುಭವ ಮತ್ತು ವಿಚಾರ ಇವುಗಳ ನೆರವನ್ನು ಪಡೆಯತಕ್ಕದ್ದು. ಇಷ್ಟೆಲ್ಲ ಆಗಿಯೂ ಒಟ್ಟಾರೆ ಈ ದಾರ್ಶನಿಕ ಪದ್ಧತಿಯಂತೆಯೂ ಜೀವನದ ಒಗಟು ಪೂರಾ ಬಿಚ್ಚಲಾರದು. ನನಗೆ ತಿಳಿದಂಥ ಅಸ್ಪಷ್ಟ ಉತ್ತರವೇ ಈ ಪದ್ಧತಿಯಿಂದಲೂ ಹೊರಡುವದು. ಆ ಜ್ಞಾನವು ಖಚಿತ (**Positive**) ವಾದ ಉತ್ತರವನ್ನು ಕೊಟ್ಟ ಹಾಗೆ ಏನೋ ಮೊದಲಿಗೆ ನನಗನಿಸಿತ್ತು. ಅದು ಹೇಗೆಂದರೆ— ಶೋಪನ್ ಹಾರನು ಹೇಳಿದಂತೆ— 'ಜೀವನವು ನಿರರ್ಥಕವಿದೆ. ಮತ್ತು ಅಶುಭವಿದೆ.' ಈ ಉತ್ತರವನ್ನು ನಾನು ಪರೀಕ್ಷಿಸಿದಾಗ ನನಗೆ ತಿಳಿದುಬಂದುದೇನಂದರೆ— ಇದು ಖಚಿತಾತ್ಮಕ (**Positive**) ವಾದ ಉತ್ತರವಲ್ಲ. ನನ್ನ ಭಾವನೆಯೇ ಹಾಗೆ ಅದನ್ನು ಪ್ರಕಟಿಸಿತು. ಬ್ರಾಹ್ಮಣರು, (ಋಷಿಗಳು) ಸಾಲೋಮನ್ ಮತ್ತು

ಶೋಪನ್ ಹಾರ ಇವರೆಲ್ಲರ ಉತ್ತರಗಳೂ ಒಂದೇ ವಿಧವಾಗಿದ್ದು ಅಸ್ಪಷ್ಟವಾಗಿವೆ. "ಶೂನ್ಯವು ಶೂನ್ಯವೇ. ಜೀವನವು ವ್ಯರ್ಥ." ಆದರೆ ದರ್ಶನವು ಯಾವ ವಿಚಾರವನ್ನೂ ಖಂಡಿಸುವದಿಲ್ಲ. ಜೀವನ ಸಮಸ್ಯೆಯನ್ನು ಸಂಪೂರ್ಣವಾಗಿ ಬಿಡಿಸುವುದು ತನ್ನಿಂದ ಸಾಧ್ಯವಿಲ್ಲವೆಂದು ಮಾತ್ರ ಅದು ಹೇಳುತ್ತದೆ.

ನನಗೆ ಈ ಮಾತು ತಿಳಿದು ಬಂದಮೇಲೆ ಅನಿಸಿದ್ದೇನಂದರೆ— ಪ್ರಶ್ನವನ್ನು ವಿಭಿನ್ನರೀತಿಯಿಂದ ಮಂಡಿಸದಿದ್ದರೆ ಅರ್ಥಾತ್ ಸಾಂತ ಅನಂತಗಳ ಸಂಬಂಧವನ್ನು ಪ್ರಶ್ನಕ್ಕೆ ಸೇರಿಸದಿದ್ದರೆ ವಿಚಾರವಾದದಲ್ಲಿ ಇವಕ್ಕೆ ಉತ್ತರವೇ ಸಿಗಲಾರದು. ಶ್ರದ್ಧೆಯು ಕೊಡುವ ವಿಚಾರಗಳು ಎಷ್ಟೋ ವಿಚಾರಹೀನ (**Irrational**) ವಾಗಿದ್ದರೂ ಅವುಗಳಲ್ಲಿ ಸಾಂತ ಅನಂತಗಳ ಒಂದು ಬಗೆಯ ಸಂಬಂಧವಾದರೂ ಇರುತ್ತದೆ. ಇದನ್ನು ಬಿಟ್ಟರೆ ಮೀಮಾಂಸೆಗೆ ಬೇರೆ ದಾರಿಯೇ ಇಲ್ಲ.

ಈ ರೀತಿಯಿಂದ ನೋಡಿದರೆ— 'ನಾನು ಹೇಗೆ ಇರಬೇಕು?' ಎಂಬ ಪ್ರಶ್ನಕ್ಕೆ ಸಿಗುವ ಉತ್ತರವೇನಂದರೆ— "ಈಶ್ವರೀಯ ನಿಯಮಾನುಸಾರವಾಗಿ" "ನನ್ನ ಜೀವನದ ಕೊನೆಯಗತಿಯೇನು?" ಎಂಬುದಕ್ಕೆ ಉತ್ತರವೇನಂದರೆ— "ನಿರಂತರವಾದ ಶಾಂತಿ ಇಲ್ಲವೆ ಕಷ್ಟ." "ಮರಣದಿಂದ ನಾಶವಾಗದ ಪದಾರ್ಥವೇನಾದರೂ ಇದೆಯೇ ಜೀವನದಲ್ಲಿ?" ಉತ್ತರವೇನಂದರೆ-"ದೇವನೊಡನೆ ಸಮ್ಮಿಲನ, ಅಥವಾ ಸ್ವರ್ಗ."

ಹೀಗೆ ನಾನು ಮಾನವಜೀವನದಲ್ಲಿ ವಿಚಾರದ ಹೊರತು ಶ್ರದ್ಧೆಗೂ ಸ್ಥಳವಿದೆಯೆಂದೂ, ಹಾಗೂ ಈ ಶ್ರದ್ಧೆಯೇ ಜೀವವನ್ನು ಬದುಕಿಸಿದೆಯೆಂದೂ ಒಪ್ಪಿಕೊಂಡೆನು. ನಾನೇನೋ ಶ್ರದ್ಧೆಯೆಂದರೆ ಅದೊಂದು ಅವಿಚಾರವೆಂದು ಎಂದಿನಂತೆ ಈ ಸಮಯಕ್ಕೂ ತಿಳಿಯುತ್ತಿದ್ದೆನು. ವಿಚಾರವಾದದ ಮೇಲೆ ನಿಂತ ಜ್ಞಾನದಿಂದ ಜೀವನವು ನಿರರ್ಥಕವೆಂದು ತೋರಿತು. ಆತ್ಮಹತ್ಯೆಕ್ಕೆ ನನ್ನ ಮನವೊಲಿಯಿತು; ಜೀವನವು ಸ್ತಂಭಿತವಾಯಿತು. ಹೀಗೆ ತರ್ಕಗಳಿಂದ ನಾನು ನಿಶ್ಚಯಕ್ಕೆ ಬಂದರೂ ಆಗಲೂ

ನನ್ನ ಜೀವನವು ಸಾಗಿಯೇ ಇತ್ತು. ನನ್ನ ಸುತ್ತು ಮುತ್ತಿನ ಜನರೆಲ್ಲಾ ಬದುಕಿರುವುದನ್ನು ಕಂಡಮೇಲೆ ನನಗೆ ತಿಳಿದು ಬಂತು– ಅವರು ಜೀವನ ಸಮಸ್ಯೆಯನ್ನು ಬಲ್ಲರೆಂದು. ಮತ್ತು ಶ್ರದ್ಧೆಯಿಂದಲೇ ಜೀವನವು ಶಕ್ಯವೆಂದು ಕಂಡು ಕೊಂಡೆನು. ಅನ್ಯ ದೇಶಗಳ ಆದಿಬುನಾದಿಯ ಜನರನ್ನೂ ಆಧುನಿಕರನ್ನೂ ಕುರಿತು ಯೋಚಿಸಲು ನನಗೆ ಇದೇ ಕಂಡು ಬಂದಿತು. ಜಗತ್ತಿನಲ್ಲಿ ಮನುಷ್ಯಜೀವನದ ಆರಂಭದಿಂದಲೂ ಶ್ರದ್ಧೆಯೇ ಆತನ ಜೀವನದ ಶಕ್ಯತೆಯನ್ನುಂಟುಮಾಡಿದೆ. ಶ್ರದ್ಧೆಯ ಸಾಮಾನ್ಯ ರೂಪರೇಖೆಯು ಎಲ್ಲೆಲ್ಲಿಯೂ ಎಂದೆಂದೂ ಹೆಚ್ಚುಕಡಿಮೆಯಾಗಿ ಒಂದೇ ವಿಧವಾಗಿರುತ್ತದೆ.

ಎಂಥದೇ ಶ್ರದ್ಧೆಯಿಂದ ಯಾರಿಗೆ ಯಾವ ಉತ್ತರವೇ ಸಿಗಲೊಲ್ಲದೇಕೆ— ಅದರೆ ಇಂಥ ಪ್ರತಿಯೊಂದು ಉತ್ತರವು ಸೀಮಾಬದ್ಧವಾದ ಮಾನವ ಜೀವನಕ್ಕೆ ಕಷ್ಟ, ದಾರಿದ್ರ್ಯ, ಮರಣ ಇವುಗಳಿಂದ ನಷ್ಟವಾಗದ ಅನಂತತೆಯ ಅರ್ಥವನ್ನು ಕೊಡುತ್ತದೆ. ಅಂತೂ ಶ್ರದ್ಧೆಯಲ್ಲಿಯೇ ಜೀವನದ ತಳಬೇರು ಇದೆಯೆಂದಂತಾಯಿತು. ಆದರೆ ಶ್ರದ್ಧೆಯೆಂದರೇನು ? ಅಪ್ರತ್ಯಕ್ಷ ವಸ್ತುಗಳ ಬಗೆಗೆ ಸಾಕ್ಷಿಯನ್ನು ಹೇಳುವುದಷ್ಟೇ ಶ್ರದ್ಧೆಯ ಅರ್ಥವಲ್ಲ. ದೇವನೊಡನೆ ಮನುಷ್ಯನ ಸಂಬಂಧವನ್ನು ಒಪ್ಪಿಕೊಳ್ಳುವುದೂ ಶ್ರದ್ಧೆಯಲ್ಲ. ವಿಚಾರಮಾಡದೆ ಹೇಳಿದ್ದನ್ನೆಲ್ಲ ಒಡಂಬಡುವದೂ ಶ್ರದ್ಧೆಯಲ್ಲ. ಜೀವನದ ಸಮಸ್ಯೆಯನ್ನು ತಿಳಿದುಕೊಳ್ಳುವುದಕ್ಕೆ ಶ್ರದ್ಧೆಯೆನ್ನುತ್ತಾರೆ. ಯಾಕೆಂದರೆ ಜೀವನದ ಆಧಾರವೇ ಅದೇ ಆಗಿದೆ. ಶ್ರದ್ಧೆಯು ಜೀವನದ ಬಲವಾಗಿದೆ. ಯಾವನೊಬ್ಬನು ಬದುಕಿದ್ದಾನೆಂದರೆ ಅವನು ಏನಾದರೊಂದರಲ್ಲಿ ಶ್ರದ್ಧೆಯಿಟ್ಟೇ ಇಟ್ಟಿರುತ್ತಾನೆ. ಏತರಲ್ಲಿಯೂ ಶ್ರದ್ಧೆಯಿಟ್ಟಿರದಿದ್ದರೆ ಆತನು ಬದುಕಿಯೇ ಇರುತ್ತಿರಲಿಲ್ಲ. ಆತನಿಗೆ ಸೀಮಾಬದ್ಧತೆಯಲ್ಲಿ ಕೊರತೆಯಿದೆಯೆಂದು ಕಂಡುಬರದಿದ್ದರೆ ಆತನು ಸೀಮಾಬದ್ಧತೆಯಲ್ಲಿ ಶ್ರದ್ಧೆಯನ್ನಿಟ್ಟೇ ತೀರುವನು. ಸೀಮಾಬದ್ಧತೆಯಲ್ಲಿ ಕೊರತೆ ಕಂಡು ಬಂದರೆ ಆತನು

ಅನಂತತೆಯಲ್ಲಿ ನಿಶ್ಚಯವಾಗಿ ಶ್ರದ್ಧೆಯಿಡುವನು. ಶ್ರದ್ಧಾರಹಿತನಾಗಿ ಆತನು ಬಾಳಲೇ ಆರನು.

ಈಗ ನಾನು ನನ್ನ ಮೆದುಳು ಹಾಗು ಬುದ್ಧಿಯು ಸಾಗಿ ಬಂದ ಹಾದಿಯನ್ನು ಹೊರಳಿ ನೋಡಿದರೆ ಹೆದರಿಕೆ ಬರುತ್ತದೆ. ನನಗೆ ಈಗ ನಿಚ್ಚಳವಾಗಿ ಅನಿಸಿ ಬಿಟ್ಟಿದ್ದೇನಂದರೆ— ಬಾಳಿ ಬದುಕು ಬೇಕೆನ್ನುವವನು ಅನಂತದ ಕಡೆಗೆ ಲಕ್ಷ್ಯವನ್ನಾದರೂ ಕೊಟ್ಟಿರಬಾರದು; ಅಥವಾ ಸಾಂತ ಅನಂತಗಳ ಪರಸ್ಪರ ಸಂಬಂಧವನ್ನು ಜೋಡಿಸಲಿಕ್ಕೆ ಬರುವಂತೆ ಜೀವನದ ಅರ್ಥವನ್ನಾದರೂ ತಿಳಿದುಕೊಂಡಿರಬೇಕು. ಮೊದಮೊದಲು ನನ್ನ ಶ್ರದ್ಧೆಯು ಸಾಂತದಲ್ಲಿತ್ತು. ಅದ್ದರಿಂದ ಆಗ ನನಗೆ ಇದಾವುದರ ಅಗತ್ಯವೇ ಇರಲಿಲ್ಲ. ಅಲ್ಲದೇ ಅದನ್ನೇ ಸಮರ್ಥಿಸುತ್ತಿದ್ದೆನು. ಆದರೆ ಸೀಮಾಬದ್ಧದಮೇಲಿನ ನನ್ನ ಶ್ರದ್ಧೆಯುಳಿಯುವಂಥ ಕಾಲವೊಂದು ಬಂತು. ಆಗ ವಿಚಾರವಾದದಿಂದ ಜೀವನದ ಅರ್ಥವನ್ನು ನಿರ್ಧರಿಸಲೆಳಸಿದೆನು. ಆದರೆ ಏನೂ ನಿಶ್ಚಿತವಾಗಲಿಲ್ಲ ಜಗತ್ತಿನ ಮಹಾಬುದ್ಧಿಶಾಲಿಗಳಿಗೆ ಕಂಡು ಬಂದಂತೆ 'ಶೂನ್ಯವು ಶೂನ್ಯಕ್ಕೆ ಸಮವಾಗಿದೆ'ಯೆಂದೆನ್ನುವಂಥ ಆಶ್ಚರ್ಯಗೊಳಿಸುವ ಪರಿಣಾಮವೇ ಹೊರಟಿತು.

ನಾನು ನನ್ನ ಪ್ರಶ್ನೆಯ ಉತ್ತರವನ್ನು ಭೌತಿಕ ವಿಜ್ಞಾನದಲ್ಲಿ ಹುಡುಕುತ್ತಿರಲು ನನಗೆ ಸಂಬಂಧವಿಲ್ಲದ ಮಾತುಗಳೆಷ್ಟೋ ಗೊತ್ತಾದವು. ಆದರೆ ನನಗೆ ಆವಶ್ಯಕವಾಗಿರುವುದೇ ಮಾತ್ರ ಏನೂ ಲಭಿಸಲಿಲ್ಲ.

ದರ್ಶನ ಶಾಸ್ತ್ರಕ್ಕೆ ನನ್ನ ಪ್ರಶ್ನವನ್ನು ಕೇಳಿದರೆ ಅದು ನನ್ನಂಥ ಪರವೇ ವಿಚಾರಗಳನ್ನು ಹೇಳಿಕೊಟ್ಟಿತು. 'ಜೀವನವೆಂದರೇನು?' ಎಂಬ ಪ್ರಶ್ನೆಗೆ ನನ್ನಂತೆ ಅವರಲ್ಲಿಯೂ ಉತ್ತರ ವಿರಲಿಲ್ಲ. "ನಾನು ಅಂದರೆ ಏನು ?"— "ಅನಂತದ ಒಂದು ಅಂಶ" ಆ ಕೆಲ ಶಬ್ದಗಳಲ್ಲಿಯೇ ಇಡಿ ಸಮಸ್ಯೆಯೆಲ್ಲ ಬಿದ್ದು ಕೊಂಡಿರುತ್ತದೆ.

ಇದೇನು? ಮಾನವಕೋಟಿಯು ಇಂದೆ ನಿನ್ನೆ ಆ ಪ್ರಶ್ನವನ್ನು ಕೇಳುವುದಕ್ಕೆ ಮೊದಲು ಮಾಡಿದೆಯೇ? ಇದಲ್ಲದೆ ಒಬ್ಬ ಚತುರ ಹುಡುಗನೂ ಕೂಡ ಕೇಳಬಹುದಾದಷ್ಟು ಸಾಮಾನ್ಯವೆನಿಸುವಂಥ ಪ್ರಶ್ನವನ್ನು ನನಗಿಂತ ಮುಂಚೆ ಯಾವನೂ ಕೇಳಿಯೇ ಇರಲಿಕ್ಕಿಲ್ಲವೇ?

ನಿಶ್ಚಯವಾಗಿ ಮಾನವನ ಅಸ್ತಿತ್ವದ ಆರಂಭದಿಂದಲೂ ಈ ಪ್ರಶ್ನವು ಇದ್ದದ್ದೇ. ಅದರಂತೆ ಸ್ವಾಭಾವಿಕವಾಗಿ ಅನಾದಿಕಾಲದಿಂದಲೂ ಅದಕ್ಕೆ ಉತ್ತರವೂ ಇದ್ದದ್ದೇ.

ಸಾಂತ ಅನಂತಗಳಲ್ಲಿ ಸಂಬಂಧವನ್ನು ಜೋಡಿಸುವ ಮತ್ತು ಜೀವನದ ಅರ್ಥವನ್ನು ಹೊರಪಡಿಸುವ ದೇವ, ಸಂಕಲ್ಪ, ಸಜ್ಜನಿಕೆ ಮೊದಲಾದವುಗಳ ಬಗೆಗಿರುವ ನಮ್ಮ ತಿಳುವಳಿಕೆಗಳನ್ನು ತರ್ಕದ ಪರೀಕ್ಷೆಗೆ ಒಳಪಡಿಸಬೇಕು. ವಿಚಾರ ವಿಮರ್ಶೆಯು ಇದಿರಿಗೆ ಅವು ತಡೆದು ನಿಲ್ಲಲಾರವು.

ಸಾಂತ ಅನಂತಗಳಲ್ಲಿಯ ವಿರೋಧದ ಕೊಡಕನ್ನು ಬಿಡಿಸುವುದೂ, ಜೀವನವನ್ನು ಬಾಳಿ ಬದುಕಿಸುವ ಜೀವನ ಮೀಮಾಂಸೆಯನ್ನು ಹೊರಕಿಸುವುದೂ ಅತ್ಯಂತ ಅವಶ್ಯಕವಾಗಿದೆ. ಪ್ರತಿಯೊಂದು ಸ್ಥಳದ ಹಾಗೂ ಪ್ರತಿಯೊಂದು ಕಾಲದ ಸರ್ವಜನಾಂಗಗಳಲ್ಲಿ ಆ ಮೀಮಾಂಸೆಯು ಉಪಲಬ್ಧವಿರುತ್ತದೆ. ಈ ಉತ್ತರವನ್ನು ಹೇಳಲಾರದವರು ನಮ್ಮಂಥವರೇ. ಅಲ್ಲದೆ ಅವೆಲ್ಲಾ ಉತ್ತರಗಳನ್ನು ಚಿಂತೆಯಿಲ್ಲದೆ ಕೈಮುಟ್ಟಿ ಕಳಕೊಂಡು ಕುಳಿತು ಬಿಡುತ್ತೇವೆ

ದೇವರ ಅನಂತತೆ, ಆತ್ಮದ ದೇವತ್ವ, ಸೃಷ್ಟಿಕರ್ತನಿಗೂ ಮನುಷ್ಯ ಕಾರ್ಯಗಳಿಗೂ ಇರುವ ಸಂಬಂಧ, ಆತ್ಮದ ಅಸ್ತಿತ್ವ ಹಾಗೂ ಐಕ್ಯ, ಒಳ್ಳೇದು ಕೆಟ್ಟದೆಂಬವುಗಳ ನೈತಿಕಕಲ್ಪನೆ ಮುಂತಾದವುಗಳ ವಿಷಯದಲ್ಲಿ ಮನುಷ್ಯವಿಚಾರದ ಗೂಢ ಅನಂತತೆಯು ಪರಿಷ್ಕಾರವಾಗಿಕೊಂಡಿದೆ. ಆ ತಿಳುವಳಿಕೆಗಳ ಹೊರತು ನಾವಾರೂ ಬದುಕಿ ಇರಲಿಕ್ಕೆ ಶಕ್ಯವಿಲ್ಲ. ಇಂಥ ಬಹುಕಾಲದ ಬಹುಜನರ ಪರಿಶ್ರಮವನ್ನೆಲ್ಲ ಅಲ್ಲಗಳೆದು

ನಾನು ನನ್ನ ಸ್ವಂತದ ರೀತಿಯಂತೆ ಅವುಗಳನ್ನೆಲ್ಲ ತಿರುಗಿ ಹೊಸದಾಗಿ ಪುನರುಜ್ಜೀವಿತಗೊಳಿಸಲಿಚ್ಛಿಸುತ್ತೇನೆ!

ಈ ವಿಚಾರಗಳು ಆಗ ನನ್ನಲ್ಲಿರಲಿಲ್ಲವಾದರೂ ಇವುಗಳ ಸಣ್ಣ ಸಣ್ಣ ಬೀಜಗಳು ಮಾತ್ರ ನನ್ನೊಳಗೆ ಬೀಡುಬಿಟ್ಟಿದ್ದವು. ಶೋಪೆನ್‌ಹಾರ್, ಸಾಲೋಮನ್ ಮತ್ತು ನನ್ನ ಸ್ಥಿತಿಯು ಮೂಢತನದ್ದಾಗಿದ್ದಿತೆಂದು ನಾನು ತಿಳಿದುಕೊಂಡೆನು. ಯಾಕೆಂದರೆ ನಮ್ಮ ಅಭಿಪ್ರಾಯದಂತೆ ಜೀವನವು ನಿರರ್ಥಕವೇ ಆಗಿದ್ದರೆ ನಾವು ಆಗಲೇ ಸತ್ತು ಹೋಗಬೇಕಿತ್ತು. ಎರಡನೆಯದೇನೆಂದರೆ—ನಮ್ಮ ತರ್ಕಗಳೆಲ್ಲ ತಿರುತಿರುಗಿ ಹೊರಟಸ್ಥಳಕ್ಕೇ ಬಂದು ಮುಟ್ಟುತ್ತವೆ ಎಂದು ಅನಿಸಿತು. ಇನ್ನು ಮೂರನೆಯ ಮಾತೇನೆಂದರೆ— ಶ್ರದ್ಧೆಯಿಂದ ಸಿಕ್ಕ ಉತ್ತರಗಳೇ ಮಾನವ ಜ್ಞಾನವನ್ನು ಕುಂಠಿಸಿ ಇಟ್ಟಿವೆ. ಅದನ್ನು ನಾವು ಅಲ್ಲಗಳೆಯುವುದಕ್ಕೇ ಶಕ್ಯವಿಲ್ಲ. ಆ ಉತ್ತರಗಳಿಂದಲೇ ಜೀವನದ ಒಗಟು ಬಿಚ್ಚುತ್ತದೆ.

# ೧೦. ಧರ್ಮ ಬೋಧಕರು ಮತ್ತು ಸಾಮಾನ್ಯರು.

ನನಗೆ ಇದು ತಿಳಿದಿದ್ದಿತಾದರೂ ಅದರಿಂದ ನನಗೆ ಒಳ್ಳೆಯದಾಗಲಿಲ್ಲ. ಯಾಕೆಂದರೆ— ಪ್ರತ್ಯಕ್ಷವಾಗಿ ವಿಚಾರವನ್ನು ಅಲ್ಲಗಳೆಯುವದಕ್ಕೆ ನನಗೆ ಬಲವಂತ ಪಡಿಸದಿದ್ದರೆ ಅಂಥ ಯಾವ ಬೂಟಿಕ ದೃಷ್ಟಿಗಾದರೂ ಒಡಂಬಡುವದಕ್ಕೆ ನಾನು ಸಿದ್ಧನಾದೆನು. ನಾನು ಬೌದ್ಧ ಮತ್ತು ಮಹಮದೀಯ ಮತಗಳ ಅಭ್ಯಾಸ ಮಾಡಿದೆ. ಅದರಲ್ಲಿಯೂ ವಿಶೇಷವಾಗಿ ಕ್ರಿಸ್ತೀ ಧರ್ಮದ ಅಭ್ಯಾಸವನ್ನು ಗ್ರಂಥಗಳ ಹಾಗೂ ಸುತ್ತ ಮುತ್ತಲಿನ ಜನರ ನಡೆನುಡಿಗಳ ನಿರೀಕ್ಷಣದ ಸಹಾಯದಿಂದ ಮಾಡಿದೆನು.

ಸ್ವಾಭಾವಿಕವಾಗಿ ನನ್ನ ಲಕ್ಷ್ಯವು ಎಲ್ಲಕ್ಕೂ ಮೊದಲು ನನ್ನ ವರ್ಗದವರಾದ ಸನಾತನ ಕ್ರಿಸ್ತೀ ಧರ್ಮದ ಅನುಯಾಯಿಗಳ ಕಡೆಗೆ ಹೊರಳಿತು. ದೊಡ್ಡ ದೊಡ್ಡ ಧರ್ಮಾಚಾರ್ಯರು, ಧರ್ಮೋಪದೇಶಕರು, ಸುವಾರ್ತಾವಾಹಕರು ಇವರನ್ನು ಲಕ್ಷ್ಯಿಸಿದೆನು ಕ್ರಿಸ್ತನ ರಕ್ಷಣವನ್ನು (Redemption) ನಂಬಿದರೆ ಮುಕ್ತಿಯಾಗಬಲ್ಲದೆಂದು ಅವರನ್ನುವರು. ಅವರ ಸಿದ್ಧಾಂತಗಳನ್ನೂ, ದೃಷ್ಟಿಗಳನ್ನೂ ಕುರಿತು ಅವರಿಗೆ ಪ್ರಶ್ನೆ ಮಾಡಿದೆನು.

ಆದರೆ ನಾನೆಷ್ಟು ಮಾಡಿದರೂ ಅವರ ಸಿದ್ಧಾಂತಗಳು ನನಗೆ ಸರಿ ಹೋಗಲಿಲ್ಲ. ಅವರ ದೃಷ್ಟಿಯಿಂದ ಜೀವನದ ಕೊಡಕು ಬಿಚ್ಚುವುದಕ್ಕೆ ಪ್ರತಿಯಾಗಿ ಅದು ಮತ್ತಿಷ್ಟು ಅಸ್ಪಷ್ಟವಾಗುತ್ತದೆಂದು ನನಗೆ ತೋರಿತು. ಅವರು ತಮ್ಮ ವಿಶ್ವಾಸವನ್ನು ಜೀವನ ಸಮಸ್ಯೆಯನ್ನು ಬಿಚ್ಚುವದಕ್ಕೆಂದು ಇಟ್ಟುಕೊಂಡಿರದೆ, ನನ್ನ ಅಭಿಪ್ರಾಯಕ್ಕೆ ಹೊರತಾದ ಇನ್ನಾವುದೋ ಬೇರೆ ಉದ್ದೇಶಗಳನ್ನು ಸಾಧಿಸುವದಕ್ಕಾಗಿ ಅದನ್ನು ಹಿಡಿದುಕೊಂಡಿದ್ದರು.

ಈ ಜನರ ಬಳಿಕೆಯಿಂದ ಬಂದ ಅನುಭವಗಳ ಮೇಲಿಂದ ನನಗೆ ಅನಿಸಹತ್ತಿದ್ದೇನಂದರೆ— ಈ ಬಗೆಗೆ ಭರವಸೆ ಹುಟ್ಟಿದ್ದರೂ ಕೂಡ ಎಲ್ಲಿ ನಾನು ಮುಂಚಿನ ನೈರಾಶ್ಯದಲ್ಲಿಯೇ ಬಿದ್ದುಕೊಳ್ಳುವೆನೋ!

ಅವರು ಎಷ್ಟೆಷ್ಟು ಹೆಚ್ಚೆಚ್ಚಾಗಿ ತಮ್ಮ ತತ್ವಗಳನ್ನು ಹೇಳಿ ಕೊಡ ಹತ್ತಿದರೋ ಅಷ್ಟಷ್ಟು ಹೆಚ್ಚಾಗಿ ನನಗೆ ಅವರ ತಪ್ಪುಗಳು ಅನುಭವಕ್ಕೆ ಬರಹತ್ತಿದವು. ಅವರ ವಿಶ್ವಾಸಗಳ ಪರಿಶೀಲನದಿಂದ ಜೀವನದ ಅರ್ಥವನ್ನು ತಿಳಿದುಕೊಳ್ಳಬಹುದೆಂದು ಭಾವಿಸಿದ್ದ ನನ್ನ ಭರವಸವು ವ್ಯರ್ಥವೆಂದು ಅನಿಸಿತು.

ಈ ಜನರು ಕ್ರಿಸ್ತೀಧರ್ಮದ ಸತ್ಯಸಿದ್ಧಾಂತದಲ್ಲಿ ಅವೆಷ್ಟೋ ಅನವಶ್ಯಕವಾದ ಅಯುಕ್ತ ಸಂಗತಿಗಳನ್ನು ಬೆರೆಸಿದ್ದರೆಂಬುದಿಷ್ಟೇ ನನಗೆ ಅವರ ವಿಷಯದಲ್ಲಿ ತಿರಸ್ಕಾರವುಂಟಾಗುವದಕ್ಕೆ ಕಾರಣವಾಗಿರಲಿಲ್ಲ. ಅದರ ಕಾರಣವು ಬೇರೆಯಾಗಿದೆ. ಅದೇನಂದರೇ— ಅವರ ಜೀವನವೂ ಸ್ವತಃ ನನ್ನಂತೆಯೇ ಇದ್ದಿತು. ಅಲ್ಲದೆ ಅವರ ತತ್ವಕ್ಕೂ ಜೀವನಕ್ಕೂ ಸಂಬಂಧವಿರಲಿಲ್ಲ. ನನಗೂ ಅವರಿಗೂ ಇಷ್ಟೇ ವ್ಯತ್ಯಾಸ. ಅವರು ತಮಗೆ ತಾವೇ ಮೋಸಮಾಡಿಕೊಳ್ಳುತ್ತಿದ್ದರು. ನನ್ನಂತೆ ಅವರಿಗೂ ಜೀವನ ಸಮಸ್ಯೆಯು ಬಿಚ್ಚಿರಲಿಲ್ಲ. ಇಷ್ಟೇ ಅಲ್ಲ, ಅವರು ಜೀವದಿಂದಿರುವಷ್ಟು ದಿನಬದುಕಿ ಕೈಗೆ ಸಿಕ್ಕಷ್ಟು ಲಾಭವನ್ನು ದೊರಕಿಸುವ ಉದ್ದೇಶವುಳ್ಳವರಾಗಿದ್ದರು. ಜೀವನ ಸಮಸ್ಯೆಯನ್ನು ಬಿಡಿಸಿಕೊಂಡವರಾಗಿದ್ದರೆ ನಷ್ಟ, ಕಷ್ಟ, ಮರಣ ಇವುಗಳಿಗೆ ಅವರು ಹೆದರುತ್ತಿರಲಿಲ್ಲ. ಆದರೆ ಅವರು ನನ್ನಂತೆ ಕಷ್ಟನಷ್ಟಗಳಿಗೆ ಭಯಭೀತರಷ್ಟೇ ಆಗಿದ್ದಿಲ್ಲ. ಗಳಿಸಿದ ಸಾಂಸಾರಿಕ ಸಮೃದ್ಧಿಯನ್ನು ಉಳಿಸಿಕೊಳ್ಳುವುದರಲ್ಲೇ ತೊಡಗಿರುತ್ತಿದ್ದರು. ಅವರು ನನ್ನಂತೆ ಹಾಗೂ ಬೇರೆ ಧರ್ಮಗೇಡಿಗಳಂತೆ ವಿಷಯವಾಸನೆಯ ದಾಸಾನುದಾಸರೂ, ದುಶ್ಶೀಲರೂ ಆಗಿದ್ದರು.

ನನಗೆ ಹೊಳೆದದ್ದೇನಂದರೆ—ಇವರ ನಂಬುಗೆಯು ನಾನರಿಸುತ್ತಿದ್ದ ಶ್ರದ್ಧೆಯಾಗಿರಲಾರದು. ಅವರ ಶ್ರದ್ಧೆಯು ಶ್ರದ್ಧೆಯೇ ಅಲ್ಲ. ಎಪಿಕ್ಯೂರಿಯನ್ (ಚಾರ್ವಾಕರ) ಸುಖವಾದವಿದು.

ಇಂಥ ಶ್ರದ್ಧೆಯು ದುಡಿಮೆಗಾಗಿ ಜನ್ಮತಾಳಿದ ಬಹು ಜನಕ್ಕೆ ಯಾವ ವಿಧದಿಂದಲೂ ಉಪಯೋಗಕ್ಕೆ ಬೀಳುವದಿಲ್ಲ. ಸಾಲೋಮನ್ ಶೋಪನ್‌ಹಾರರೇ ಆಗಲಿ, ನಾನೇ ಆಗಲಿ ಆತ್ಮಹತ್ಯೆಕ್ಕೆ ಸಿದ್ಧರಾಗಿಯೂ ಅದನ್ನು ಮಾಡಿಕೊಳ್ಳದಿದ್ದದ್ದೊಂದರಿಂದಲೇ ಶ್ರದ್ಧೆಯ ಅಸ್ತಿತ್ವವು ಸಿದ್ಧವಾಗುವದೆಂತಲ್ಲ. ಆದರೆ ಸಮಸ್ತ ಮಾನವಕೋಟಿಯುಬಾಳಿಬದುಕಿದ್ದೇ ಅದಕ್ಕೆ ತಕ್ಕ ಸಾಕ್ಷಿಯಾಗಿದೆ. ಮತ್ತು ಆ ಜನಜೀವನವೆಂಬುದು ತಾನು ಬಾಳಿ ಬದುಕಿದ್ದಲ್ಲದೆ ತನ್ನ ಸಂಗಡ ನನ್ನನ್ನೂ, ಸಾಲೋಮನ್ ನನ್ನೂ ಹೊತ್ತುಕೊಂಡು ಸಾಗಿರುವದು.

ಮತ್ತು ನಾನು ಬಡವರೂ, ಸಾಮಾನ್ಯರೂ, ಅಶಿಕ್ಷಿತರೂ ಆದ ಒಕ್ಕಲಿಗರು, ಸಾಧುಗಳು ಹಾಗೂ ಸಾಂಪ್ರದಾಯಕರು ಇವರ ಸಂಗತಿಯಲ್ಲಿ ಇರಹತ್ತಿದೆ. ಡಾಂಭಿಕ ಧಾರ್ಮಿಕರಂತೆಯೇ ಈ ಜನರ ಶ್ರದ್ಧೆಯೂ (ತಮ್ಮ) ಕ್ರಿಸ್ತೀಧರ್ಮದಲ್ಲಿತ್ತು. ಇವರೊಳಗೂ ಧಾರ್ಮಿಕ ಸತ್ಯಗಳಲ್ಲಿ ಮೂಢ ಶ್ರದ್ಧೆಗಳು ಸೇರಿಕೊಂಡಿದ್ದವು. ಆದರೆ ಭೇದವಿಷ್ಟೇ— ನಮ್ಮ ವರ್ಗದ ಧಾರ್ಮಿಕರ ಮೂಢ ಶ್ರದ್ಧೆಗಳು ಅವರಿಗೆ ಅನವಶ್ಯಕವಾಗಿದ್ದವು. ಆದರೆ ದುಡಿಮೆಗಾರರ ಅಂಧಶ್ರದ್ಧೆಗಳು ಅವರ ಜೀವನಕ್ಕೆ ಅನಿವಾರ್ಯವಾಗಿ ಅದರೊಡನೆ ತಾದಾತ್ಮ್ಯಹೊಂದಿದ್ದವು. ಧರ್ಮಾಚಾರವವರ ಶ್ರದ್ಧೆಗೂ ಜೀವನಕ್ಕೂ ಪರಸ್ಪರ ವಿರೋಧವಿತ್ತು. ಆದರೆ ಈ ಜನರ ಶ್ರದ್ಧೆಗೂ ಜೀವನಕ್ಕೂ ಸಖ್ಯವಿತ್ತು. ನನ್ನ ವರ್ಗದ ಜನರಲ್ಲಿ ಶ್ರದ್ಧಾಳುಗಳು ಸಾವಿರಕ್ಕೊಬ್ಬರು ಸಿಗಬಹುದು. ಅದೂ ದುರ್ಲಭವಾಗಿ. ಆದರೆ ಇದಕ್ಕೆ ವಿಪರೀತವಾಗಿ ದುಡಿಮೆಗಾರರಲ್ಲಿ ಸಾವಿರದೊಳಗೆ ಒಬ್ಬನು ಸಹ 'ಧರ್ಮಗೇಡಿ'ಯು ಸಿಗಲಿಕ್ಕಿಲ್ಲ. ನನ್ನ ವರ್ಗದವರಲ್ಲಿ ನಾನು ಪೈಗಳ್ಳತನ, ಭೋಗವಿಲಾಸ ಮತ್ತು ಅತೃಪ್ತಿ ಇವುಗಳನ್ನು ಕಂಡೆ. ಆದರೆ ಇದಕ್ಕೆ ವಿಪರೀತವಾಗಿ ಆ ಜನರು ದುಡಿತದಿಂದಲೂ, ಸಂತೋಷದಿಂದಲೂ ಬದುಕಿ ಬಾಳುತ್ತಿರುವುದನ್ನು ಕಂಡೆ. ನನ್ನ ವರ್ಗದ ಜನರು ಕಷ್ಟದಿಂದಲೂ, ಆಪತ್ತುಗಳಿಂದಲೂ ವ್ಯಾಕುಲರಾದುದನ್ನು ಕಂಡೆ. ಆದರೆ ಅವರು ರೋಗ ಮತ್ತು ದುಃಖಗಳನ್ನು 'ಆಗುವದೆಲ್ಲಾ ತಮ್ಮ

ಹಿತಕ್ಕಾಗಿ' ಯೆಂಬ ಶ್ರದ್ಧೆಯಲ್ಲಿ ಪಳಗಿಸಿಟ್ಟುಕೊಂಡಿರುವುದನ್ನು ಕಂಡೆ. ವಿದ್ಯಾಸಂಪಾದನೆಯ ಹೊರತು ಜೀವನ ಸಮಸ್ಯೆಯೇ ಬಗೆಹರಿಯದೆಂಬ ವಿಚಾರ ನಮ್ಮವರದು. ಆದರೆ ಹುರುಪಿನಿಂದ ದುಡಿತದೊಡನೆ ಬದುಕಿ ಬಾಳುವುದು ಕಷ್ಟಗಳನ್ನು ತಾಳಿಕೊಳ್ಳುವುದು ಹಾಗು ಗೆಲವುನಲಿವುಗ ಳಿಂದಲೇ ಮೃತ್ಯುವನ್ನು ಇದುರಿಸುವುದು ಆ ಜನರದು. ನಮ್ಮವರಲ್ಲಿ ಶಾಂತಚಿತ್ತದಿಂದ ಪ್ರಾಣತ್ಯಾಗಮಾಡುವವರು ವಿರಲ. ಆದರೆ ಅವರಲ್ಲಿ ವಿರಲರೆಂದರೆ— ಸಾಯುವಾಗ ಸಂಕಟಪಡುವವರು. ಅವರ ಹತ್ತಿರ ನನ್ನಂತೆ ಹಾಗೂ ಸಾಲೋಮನನಂತೆ ಧನಸಂಪತ್ತು ಇಲ್ಲ. ಆದರೂ ಅವರು ಮಹಾಸುಖವನ್ನು ಅನುಭವಿಸುತ್ತಾರೆ. ನಾನು ಬೇರೆ ಬೇರೆ ದೇಶಗಳ ಹಿಂದಿನ ಮತ್ತು ಇಂದಿನ ದುಡಿಮೆಗಾರರ ಜೀವನವನ್ನು ಕೂಲಂಕಷವಾದ ನಿರೀಕ್ಷಣೆಯನ್ನು ಮಾಡಲು ಕಂಡುಬಂದುದೇನಂದರೆ— ಅವರಲ್ಲಿ ಒಬ್ಬಿಬ್ಬರಲ್ಲ— ಹತ್ತಿಪ್ಪತ್ತು ಜನರಲ್ಲ— ಸಾವಿರಾರುಜನ— ಕೋಟ್ಯವಧಿ ಜನರು ಜೀವನ ಸಮಸ್ಯೆಯನ್ನು ಚೆನ್ನಾಗಿ ಅರಿತುಕೊಂಡು ಬಾಳುವುದಕ್ಕೂ, ಸಾಯುವುದಕ್ಕೂ ಸಮರ್ಥರಾಗಿದ್ದಾರೆ. ಈ ಜನರ ನಡತೆ, ಬುದ್ಧಿ, ಶಿಕ್ಷಣ, ಸ್ಥಿತಿ ಇವೆಲ್ಲವುಗಳಲ್ಲಿ ಭೇದವಿದ್ದರೂ ಅವರು ಜೀವನದ ತೊಡಕನ್ನು ಚೆನ್ನಾಗಿ ತಿಳಕೊಂಡಿದ್ದಾರೆ. ಹುಟ್ಟು, ಸಾವು, ಕಷ್ಟ, ನಷ್ಟ ಇವುಗಳು ನಿರರ್ಥಕವಾದವುಗಳೆಂದು ಅವರು ತಿಳಿಯುವದಿಲ್ಲ. ಇಷ್ಟೇ ಅಲ್ಲ, ಅವುಗಳಲ್ಲ ತಮ್ಮ ಕಲ್ಯಾಣವಿದೆಯೆಂದು ಭಾವಿಸುತ್ತಾರೆ.

ಈ ಜನರನ್ನು ನಾನು ಪ್ರೀತಿಸುವುದಕ್ಕೆ ಕಲಿತೆನು. ಈ ಜನರ ಜೀವನದ ಪರಿಚಯವು ಸ್ವಂತ ನಿರೀಕ್ಷಣೆಯಿಂದಾಗಲೀ, ಪುಸ್ತಕಾವ-ಲೋಕನದಿಂದಾಗಲಿ ಬೆಳೆಯುತ್ತ ಹೋಯಿತು. ಅವರ ಮೇಲಿನ ನನ್ನ ಪ್ರೇಮವು ಬೆಳೆಬೆಳೆದಂತೆ ನಾನು ಬಾಳುವುದೂ ನನಗೆ ಸುಲಭವಾಯಿತು. ಈ ರೀತಿಯಿಂದ ನಾನು ಎರಡು ವರುಷ ಕಳೆದೆನು. ಆ ಬಳಿಕ, ಬಹು ದಿನಗಳಿಂದ ಸಿದ್ಧತೆಯಲ್ಲಿದ್ದ ಮಾರ್ಪಾಡೊಂದು ನನಲ್ಲಿ ಉಂಟಾಯಿತು.

ಆಗ ನಮ್ಮ ವರ್ಗದ ಸಿರಿವಂತರ ಹಾಗೂ ಸುಶಿಕ್ಷಿತರ ಜೀವನದ ಬಗ್ಗೆ ನನ್ನಲ್ಲಿ ತಾತ್ಸಾರವುಂಟಾಯ್ತು. ನಮ್ಮ ಕೃತಿಗಳು, ನಮ್ಮ ವಾದ-ವಿವಾದಗಳು, ವಿಜ್ಞಾನ ಮತ್ತು ಕಲೆಗಳು ಇವೆಲ್ಲ ನನಗೆ ಸ್ವೇಚ್ಛಾಚಾರ ವಾಗಿ ತೋರಹತ್ತಿದವು. ಇವುಗಳಿಂದ ಜೀವನದ ತೊಡಕು ಬಿಡಿಸಲಿಕ್ಕಾಗ ದೆಂಬ ವಿಚಾರವು ನನ್ನ ತಲೆಯಲ್ಲಿ ತುಂಬ ಹತ್ತಿತು. ದುಡಿಮೆಗಾರರ, ಅದರಲ್ಲೂ ತಮ್ಮ ಜೀವನಕ್ಕೆ ಬೇಕಾಗುವ ಸಾಹಿತ್ಯಗಳನ್ನು ತಾವೇ ದೊರಕಿಸಿಕೊಳ್ಳುವವರ ಸತ್ಯಸ್ಥಿತಿಯು ನನಗೆ ಗೊತ್ತಾಯ್ತು. 'ಇದೇ ನಿಜ ವಾದ ಜೀವನ'ವೆಂದೂ, ಇದರಿಂದಾಗುವ ಪರಿಣಾಮವು ಒಳ್ಳೇಯದೆಂದೂ ನನಗೆ ತಿಳಿಯಿತು. ಅಂತೂ ನಾನು ಇಂಥ ಜೀವನಕ್ಕೆ ಒಡಂಬಟ್ಟೆನು.

---

# ೧೧. ಕಣ್ಣು ನಿರ್ಮಲವಾಗಿರಬೇಕು.

ಯಾವ ಸಿದ್ಧಾಂತಗಳಿಂದ ಮೊದಲು ತಾತ್ಸಾರವುಂಟಾಗಿದ್ದಿತೋ ಹಿಂದುಗಡೆ ಅವೇ ಸಿದ್ಧಾಂತಗಳ ಬಗೆಗೆ ಪ್ರೇಮವುಂಟಾಯಿತು. ಅದರ ಕಾರಣವೇನಂದರೆ— ನಾನು ನನ್ನಲ್ಲಿ ತಾತ್ಸಾರಬುದ್ಧಿ ಹುಟ್ಟಲಿಕ್ಕೆ ಕಾರಣರಾದ ಜನರ ನಡೆನುಡಿಗಳಲ್ಲಿ ಮಹದಂತರವಿತ್ತು. ಅದಕ್ಕೆ ವಿಪರೀತವಾಗಿ ಆ ಸಿದ್ಧಾಂತಗಳ ಬಗ್ಗೆ ಪ್ರೇಮವುಂಟಾಗಲಿಕ್ಕೆ ಕಾರಣರಾದ ಜನರ ನಡೆನುಡಿಗಳಲ್ಲಿ ಭೇದವಿರಲಿಲ್ಲ. ನಾನು ತಪ್ಪುತ್ತಿದ್ದೇನೆಂದೂ, ಎಲ್ಲಿ ತಪ್ಪುವೆನೆಂದೂ ಈಗ ನಾನು ಕಂಡುಕೊಂಡೆನು. **ನನ್ನಿಂದ ತಪ್ಪುಗಟ್ಟು ಆದುದಕ್ಕೆ ನನ್ನ ದೂಷಿತ ಜೀವನವು ಕಾರಣವಾಗಿರುವಷ್ಟು ನನ್ನ ಅಶುದ್ಧ ವಿಚಾರ ಶೈಲಿಯು ಕಾರಣವಾಗಿರಲಿಲ್ಲ.** ನನ್ನ ಜೀವನವು ಎಪಿಕ್ಯೂರಿಯನ್ (ಚಾರ್ವಾಕ) ಸುಖವಾದದಿಂದ ದೂಷಿತವಾದುದಾಗಿದ್ದರಿಂದಲೇ ನನಗೆ ಸತ್ಯವು ಮರೆಯಾಗಿದ್ದಿತು. ನನ್ನ ಜೀವನದ ಪ್ರಶ್ನೆಗೆ 'ಅಶುಭಮಯ' ಎಂಬ ಉತ್ತರವು ಸರಿಯಾಗಿದ್ದಿತಲ್ಲದೆ ಅದು ನನಗೊಬ್ಬನಿಗೆ ಮಾತ್ರವೇ ಸಂಬಂಧಿಸುವದೆಂದು ನನಗೆ ತೋರಿತು. ತಪ್ಪುಗಟ್ಟಾದುದು ಇಷ್ಟೇ— ನನಗಷ್ಟೇ ಸಂಬಂಧಿಸಿದ ಉತ್ತರಗಳನ್ನು ನಾನು ಜನಸಾಮಾನ್ಯಕ್ಕೆಲ್ಲಾ ಸಂಬಂಧಪಡಿಸಬೇಕೆನ್ನುತ್ತಿದ್ದೆ. "ನನ್ನ ಜೀವನವು ಎಂತಹದು?" ಎಂದು ನಾನು ಕೇಳಿಕೊಂಡಾಗ ನನಗೆ ಸಿಗುತ್ತಲಿದ್ದ ಉತ್ತರವೇನಂದರೆ— "ದೂಷಿತ ಹಾಗೂ ನಿರರ್ಥಕ." ವಾಸನಾತೃಪ್ತಿಗಾಗಿ ಹವಣಿಸುತ್ತಿದ್ದ ನನ್ನ ಜೀವನವು ನಿಜವಾಗಿಯೂ ಹಾಗೆ ಇದ್ದಿತು. ಮೊದಲು ನನ್ನ ಮನಸ್ಸಿಗೆ ಹೊಳೆದದ್ದೇ ಹಿಂದುಗಡೆ ಬೈಬಲ್ಲಿನಲ್ಲಿಯೂ ಓದಲಿಕ್ಕೆ ಸಿಕ್ಕಿತು. ಅದೇನಂದರೆ— "ಮನುಷ್ಯನು ಬೆಳಕಿಗಿಂತ ಕತ್ತಲೆಯೇ ಒಳಿತೆಂದು ತಿಳಿಯುತ್ತಾನೆ. ಯಾಕೆಂದರೆ ಆತನ ಆಚರಣವು ದೂಷಿತವಾಗಿರುತ್ತದೆ. ಪ್ರತಿಯೊಬ್ಬ ಕೆಟ್ಟಮನುಷ್ಯನು ತನ್ನ ಕೆಟ್ಟ ಕೆಲಸಗಳು ಬಯಲಿಗೆ ಬೀಳಬಾರದೆಂದು ಬೆಳಕನ್ನು ಹೀಗಳಿಸುತ್ತಾನೆ."

ಜೀವನದ ಅರ್ಥವನ್ನು ತಿಳಿದುಕೊಳ್ಳಬೇಕಾದರೆ ಎಲ್ಲಕ್ಕೂ ಮೊದಲಿಗೆ ತನ್ನ ಜೀವನವು ದೂಷಿತವೂ, ನಿರರ್ಥಕವೂ ಆಗಿರಬಾರದು. ಆ ಮೇಲೆ ಬುದ್ಧಿ. ಸತ್ಯಸಿದ್ಧಾಂತವು ಇಷ್ಟು ಸನಿಹದಲ್ಲೇ ಇದ್ದರೂ ಅದು ನನ್ನನ್ನೇಕೆ ತೊಳಲಾಡಿಸಿತೆಂಬುದು ನನಗೆ ತಿಳಿದು ಬಂದಿತು. ಸಮಸ್ತ ಮಾನವ ಜೀವನದ ಬಗ್ಗೆ ವಿಚಾರ ಮಾಡುವುದಾದರೆ ನಿಜವಾದ ಜೀವನವನ್ನು ನಿರೀಕ್ಷಿಸಬೇಕು. ಪರರನ್ನವಲಂಬಿಸಿ ಜೀವನ ಸಾಗಿಸುತ್ತಿರುವವರ ಜೀವನದಿಂದ ಪ್ರಯೋಜನವಿಲ್ಲ. ಈ ಸತ್ಯದಲ್ಲಿ ಎಷ್ಟು ಸತ್ಯಾಂಶವಿದೆಯೆಂದರೆ— ‘ಎರಡು ಎರಡಲೇ ನಾಲ್ಕು’ ಎಂಬುದು ಸರಿಯಾಗಿರುವಷ್ಟು. ಆದರೆ ನಾನು ಆ ವಾಸ್ತವವನ್ನು ಒಪ್ಪಿಸಿಕೊಳ್ಳುವ ಗೊಡವೆಗೆ ಹೋಗಲಿಲ್ಲ. ಯಾಕೆಂದರೆ ಅದರೊಡನೆ ನಾನು ಸದೋಷಿಯೆಂದು ಒಪ್ಪಿಕೊಂಡಂತೆ ಆಗುತ್ತಿತ್ತು. ಆ ಕಾಲಕ್ಕೆ ನಾನು ‘ಎರಡು ಎರಡಲೇ ನಾಲ್ಕು’ರ ಗೊಂದಲದಲ್ಲಿ ಬೀಳುವದಕ್ಕಿಂತ ನನ್ನನ್ನು ನಾನು ದೋಷರಹಿತನೆಂದು ಭಾವಿಸುವುದರ ಅಗತ್ಯವೇ ನನಗೆ ಹೆಚ್ಚಾಗಿದ್ದಿತು. ಆದರೆ ನಾನು ಒಳ್ಳೆಯವರನ್ನು ಪ್ರೀತಿಸಿ ನನ್ನನ್ನು ತಿರಸ್ಕರಿಸಿಕೊಂಡು ಸತ್ಯವನ್ನು ಒಪ್ಪಿಕೊಂಡಾಗಲೇ ನನಗೆ (ಈಗ) ಎಲ್ಲವೂ ನಿಚ್ಚಳವಾಯಿತು.

ಆಯುಷ್ಯವನ್ನೆಲ್ಲಾ ಜನರ ತಲೆಹಾರಿಸುವುದರಲ್ಲಿಯೇ ಕಳೆದ ಕೊಲೆಗಡಕನನ್ನಾಗಲಿ, ಇಲ್ಲವೆ ಜಗತ್ತಿನಲ್ಲಿ ಸೆರೆಕುಡಿಯುವುದನಲ್ಲದೆ ಇನ್ನೊಂದು ಕೆಲಸಕ್ಕೆ ಲಕ್ಷ್ಯವನ್ನೇ ಕೊಟ್ಟಿರದ ಕುಡಕನನ್ನಾಗಲಿ, ಹುಚ್ಚನನ್ನಾಗಲಿ ಕೇಳಬೇಕು— ‘ಜೀವನವೆಂದರೇನೆಂ’ದು. ಅವಕ್ಕೆ ಏನು ಉತ್ತರದೊರೆಗುತ್ತದೆ? ತನ್ನನ್ನು ತಾನು ಕತ್ತಲೆ ಕೋಣೆಯಲ್ಲಿ ಕಟ್ಟಿಹಾಕಿಕೊಂಡು ಮನೆಯ ಹೊರಗೆ ಕಾಲಿಟ್ಟರೆ ನಾಶವಾಗುವೆನೆಂದು ತಿಳಿದುಕೊಂಡಿರುವ ಹುಚ್ಚನು ಏನೆಂದು ಉತ್ತರವನ್ನೀಯುವನು? “ಜೀವನವು ಬಹಳ ಕೆಟ್ಟದು” ಎಂಬುದೇ ಅವನ ಅನಿಸಿಕೆಯು ನಿಜವಾಗಿಯೂ ಈ ಉತ್ತರವು ಇದನ್ನು ಹೇಳಿಕೊಟ್ಟವನ ಮಟ್ಟಿಗೆ ಸರಿಯಾಗಿಯೇ ಇದೆ. ಏನು? ನಾನು ಇಂಥ ಒಬ್ಬ ಹುಚ್ಚನೇ ಆಗಿದ್ದರೆ? ಅಥವಾ ಸಿರಿವಂತರೂ, ಉಂಡಾಡಿಗರೂ ಆದ ನನ್ನಂಥವರೆಲ್ಲರೂ

ಹುಚ್ಚರೇ ಏನು ? ನಿಜವಾಗಿಯೂ ಹುಚ್ಚರೇ ಎಂದು ನಾನು ತಿಳಿಯುತ್ತೇನೆ. ನಿಶ್ಚಯವಾಗಿ ನಾನಂತೂ ಅದೇ ಇದ್ದೇನೆ.

ಹಕ್ಕಿಯನ್ನು ನೋಡಿರಿ. ಹಾರಾಡುವುದು, ಕಾಳುಕಡಿಗಳನ್ನು ಆರಿಸುವುದು ಮತ್ತು ಗೂಡನ್ನು ಕಟ್ಟುವುದು ಇವುಗಳಿಗಾಗಿ ಅದು ಬದುಕಿ ಬಾಳುತ್ತದೆ. ಇದನ್ನು ಕಂಡರೆ ನನಗೆ ಹರುಷವೇರುತ್ತದೆ. ಆಡು, ಮೊಲ, ತೋಳ ಮುಂತಾದವುಗಳು ತಮ್ಮ ಹೊಟ್ಟೆಯನ್ನು ತಾವು ತುಂಬಿಕೊಳ್ಳುತ್ತವೆ. ಮತ್ತು ಮರಿಗಳನ್ನು ಹೆತ್ತು ಅವುಗಳನ್ನು ಜೋಪಾನ ಮಾಡುತ್ತವೆ. ಅವುಗಳು ಹೀಗೆ ಮಾಡುವುದನ್ನು ನಾನು ನೋಡಿದಾಗ ನನಗೆ ಅನಿಸುವುದೇನೆಂದರೆ— ಅವು ಸುಖಿಗಳಾಗಿವೆ. ಮತ್ತು ಅವುಗಳ ಜೀವನವು ಸಯುಕ್ತಿಕವಾಗಿದೆ. ಆದರೆ ಮನುಷ್ಯನು ಮಾಡಬೇಕಾದುದೇನು ? ಆತನೂ ಪಶುಪಕ್ಷಿಗಳಂತೆ ತನ್ನ ಉಪಜೀವನವನ್ನು ತಾನೇ ನಡೆಯಿಸಬೇಕು. ಆದರೆ ಅವುಗಳಿಗೂ ಈತನಿಗೂ ವ್ಯತ್ಯಾಸವಿಷ್ಟೆ: ಅದೇನೆಂದರೆ— ಬರೀ ತನ್ನೊಬ್ಬನ ಸಲುವಾಗಿ ಮಾತ್ರವಲ್ಲ; ಸರ್ವರ ಸಲುವಾಗಿ ದುಡಿಯಬೇಕು. ಬರೀ ತನ್ನ ಹಿತಕ್ಕೇ ಹೆಣಗಾಡಿದರೆ ಹಾಳಾಗುವನು. **ಎಲ್ಲರ ಸಲುವಾಗಿ ಪರಿಶ್ರಮಮಾಡುವವನು ಹರುಷಪಡುತ್ತಾನೆಂದು ನನಗೆ ತುಂಬಾ ನಂಬಿಗೆ ಇದೆ.** ಆತನ ಜೀವನವು ಸಯುಕ್ತಿಕವಾದದ್ದು. ನಾನು ನನ್ನ ( ಈಚೆಗಿನ ) ಮೂವತ್ತು ವರುಷಗಳಲ್ಲಿ ಏನು ಮಾಡಿದೆ ? ಪರರ ಸಲುವಾಗಿಯೂ ದುಡಿಯಲಿಲ್ಲ. ನನ್ನ ಸಲುವಾಗಿಯೂ ಇಲ್ಲ. ನಾನು ಪರೋಪಜೀವಿಯಾಗಿ ಬದುಕಿದೆನು. ಹೀಗೆಂದ ಬಳಿಕ 'ನನ್ನ ಜೀವನದ ಉಪಯೋಗವೇನು ?' ಎಂಬ ಪ್ರಶ್ನಕ್ಕೆ— 'ಏನೂ ಉಪಯೋಗವಿಲ್ಲ' ಎಂಬ ಉತ್ತರವೇ ನನಗೆ ಸಿಕ್ಕದ್ದು ಯೋಗ್ಯವಾಗಿದೆ. ಜೀವನದ ಅರ್ಥವು ಆ ಜೀವನವೆಂಬುದಕ್ಕೆ ನಮ್ಮಿಂದಾಗಬೇಕಾದ ಪೋಷಣದಲ್ಲಿಯೇ ಇದ್ದದ್ದಾದರೆ, ಮೂವತ್ತು ವರುಷಗಳಿಂದ ಅದನ್ನು ಪೋಷಿಸುವುದಕ್ಕೆ ಬದಲಾಗಿ ನಾಶಿಸುವ ಕೆಲಸವನ್ನೆ ಮಾಡಿದ ನನಗೆ ನನ್ನ ಜೀವನವು ನಿರರ್ಥಕವಾದುದಾಗಿಯೂ,

ಅಶುಭಮಯವಾಗಿಯೂ ತೋರಿದ್ದರಲ್ಲಿ ಆಶ್ಚರ್ಯವೇನು? ನಿಜವಾಗಿಯೂ ಅದು ನಿರರ್ಥಕವೂ ದೂಷಿತವೂ ಆಗಿದ್ದಿತು.

ಜಗತ್ತಿನ ಜೀವನವು ಯಾವನೋ ಒಬ್ಬನ ಸಂಕಲ್ಪದಿಂದ ಸಾಗುತ್ತಿದೆ. ನಮ್ಮ ಮತ್ತು ಜಗತ್ತಿನ ಜೀವನದಿಂದ ಆ ಯಾವನೋ ಒಬ್ಬನು ತನ್ನ ಉದ್ದೇಶವನ್ನು ಸಾಧಿಸುತ್ತಲಿದ್ದಾನೆ. ನಮಗೆ ಆ ಸಂಕಲ್ಪದ ಅರ್ಥವನ್ನು ತಿಳಿದುಕೊಳ್ಳುವ ಆಶೆಯಿದ್ದರೆ ಅದು ನಮ್ಮಿಂದ ಆಶಿಸುವ ಕೆಲಸವನ್ನು ನಾವು ಮಾಡಿ ನೆರವೇರಿಸಲು ಬೇಕು. ಅವರ ಬೇಡಿಕೆಯನ್ನು ನಾವು ನೆರವೇರಿಸಲಾರೆವಾದರೆ ನಮಗೆ ಆದಾವುದರ ಜ್ಞಾನವೂ ಆಗಲಾರದು.

ಯಾವನೋ ಒಬ್ಬ ಹಸಿದ ಬರಿ ಮೈ ಭಿಕಾರಿಯನ್ನು ಹಾದಿಯಲ್ಲಿ ಹಿಡಿದು, ಕಾರಖಾನೆಗೆ ಸಂಬಂಧಿಸಿದ ಒಂದು ಭವ್ಯ ಕಟ್ಟಡಕ್ಕೆ ಕರೆದೊಯ್ದು ಆತನಿಗೆ ತಿನ್ನಿಸಿ, ಉಣ್ಣಿಸಿ, ಕುಡಿಸಿ ಅಲ್ಲಿರುವ ಒಂದು ಯಂತ್ರದ ಹಿಡಿಕೆಯನ್ನು ಮೇಲೆ ಕೆಳಗೆ ಒತ್ತುತ್ತಾ ಇರು ಎಂದು ನಾವು ಆಜ್ಞಾಪಿಸಿದರೆ, ಏನು, ಎಂತು, ಏಕೆ ಎಂದು ಪ್ರಶ್ನಮಾಡದೆ ಮೊದಲು ಆತನು ಆ ಒತ್ತುವ ಕೆಲಸವನ್ನು ಮಾಡತಕ್ಕದ್ದು. ಅಷ್ಟಾದರೆ ಸ್ವಲ್ಪ ಹೊತ್ತಿನಲ್ಲಿ ಆತನಿಗೆ ತಾನಾಗಿಯೇ ಅದು ನೀರಿನ ಪಂಪು ಎಂದು ತಿಳಿದು ಬರುವದು. ಈ ಯಂತ್ರದಿಂದ ಮೇಲೆ ಬಂದ ನೀರು ತೋಟಕ್ಕೆ ಹೋಗುತ್ತದೆಯೆಂಬುದು ಆವನಿಗೆ ವಿದಿತವಾಗುವದು. ಬಳಿಕ ಆತನನ್ನು ಪಂಪಿನ ಕೆಲಸದಿಂದ ಬಿಡಿಸಿ, ಗಿಡಗಳಿಂದ ಹಣ್ಣುಗಳನ್ನು ಕೂಡಿಸುವ ಕೆಲಸಕ್ಕೆ ಹಚ್ಚಲಾಗುವದು. ಹೀಗೆ ಸಣ್ಣ ಸಣ್ಣ ಕೆಲಸಗಳಿಂದ ದೊಡ್ಡ ದೊಡ್ಡ ಕೆಲಸಗಳನ್ನು ಮಾಡುತ್ತ ಹೋದಂತೆ ಆತನಿಗೆ ಕಾರಖಾನೆಯ ಸಂಪೂರ್ಣ ರಚನೆಯೆಲ್ಲಾ ತಿಳಿದುಬಿಡುವದು. ಆ ಮೇಲೆ ಆತನು ತಾನಲ್ಲಿ ಏತಕ್ಕೆ ಇದ್ದೇನೆಂದು ಪ್ರಶ್ನಮಾಡಲಾರನು. ಮತ್ತು ತನ್ನ ಒಡೆಯನನ್ನು ಎಂದೂ ದೂರಲಾರನು.

ನಾವು ಪಶುವೆಂದು ಭಾವಿಸುವ ಸ್ವಾಮಿನಿಷ್ಠರಾದ ಅಜ್ಞಶ್ರಮ ಜೀವಿಗಳು ತಮ್ಮ ಒಡೆಯನನ್ನು ಎಂದೂ ದೂರಿಕೊಳ್ಳರು. ಆದರೆ ಬುದ್ಧಿವಂತರಾದ ನಾವು ನಮ್ಮ ಒಡೆಯನ ಅನ್ನವನ್ನು ಉಂಡೂ ಕೂಡ ಆತನ ಇಷ್ಟದಂತೆ ಕೆಲಸಮಾಡುವದಿಲ್ಲ. ಇಷ್ಟೇ ಅಲ್ಲ. ಗುಂಪು ಗಟ್ಟಿ ಕಳಿತುಕೊಂಡು— "ಈ ಪಂಪನ್ನು ನಾವು ಏತಕ್ಕೆ ಒತ್ತುತ್ತ ಇರಬೇಕು? ಇದು ಮೂಢತನವಲ್ಲವೋ ?" ಎಂದು ಚರ್ಚೆಯನ್ನು ನಡಿಸುವೆವು. ಈ ಬಗೆಯಿಂದ ನಾವು ನಿರ್ಧರಿಸುವುದೇನಂದರೆ— "ಒಡೆಯನು ಮೂರ್ಖನಿದ್ದಾನೆ. ಅಥವಾ ಅವನು ಇಲ್ಲವೇ ಇಲ್ಲ. ನಾವು ಬುದ್ಧಿವಂತರು. ಸಮನಾಗಿ ನಾವು ಏನಾದರೂ ಮಾಡುತ್ತಾ ಇರೋಣ."



# ೧೨. ಪರ್ವತಾರೋಹಣ.

ವೈಚಾರಿಕ ಜ್ಞಾನದ ದೋಷದರ್ಶನದಿಂದ ಕೆಲಸಕ್ಕೆ ಬಾರದ ತರ್ಕಲಾಲಸೆಯ ಕೈಯೊಳಗಿಂದ ಪಾರಾಗುವದಕ್ಕೆ ನನಗೆ ಬಹಳ ಸಹಾಯವಾಯ್ತು. ಸತ್ಯದ ಜ್ಞಾನವು (ಯಥಾರ್ಥ) ಜೀವನದಿಂದ ಮಾತ್ರ ಲಭಿಸುವದೆಂಬ ಮಾತು ಮನವರಿಕೆಯಾದದ್ದರಿಂದ ನನ್ನ ಜೀವನವು ಇದಕ್ಕೆ ವಿಪರೀತವಾಗಿರಬಲ್ಲದೆಂದು ಊಹಿಸಲನುವಾಯಿತು. ಆದರೆ ನನ್ನ ಜನಸಂಪರ್ಕವಿಲ್ಲದ ಜೀವನವನ್ನು ನಿರಾಕರಿಸಿ ಪುದ್ಧದುಡಿಮೆಗಾರರ ವಾಸ್ತವಿಕ ಜೀವನವನ್ನು ಲಕ್ಷಿಸಿದಾಗ ನನಗೆ ನಿಜವಾದ ಜೀವನವೆಂದರೆ ಅದೇಯೆಂದು ತಿಳಿದು ಬಿಟ್ಟಿತು. ಜೀವನವನ್ನೂ ಅದರ ಅರ್ಥವನ್ನೂ ಅರಿಯಲೆಳಸಿದರೆ ನಾವು ಪರೋಪಜೀವಿಗಳಾಗಲು ಬಾರದು. ನಿಜವಾದ ಜನರು ಜೀವನಕ್ಕೆ ಕೊಟ್ಟ ಅರ್ಥವನ್ನು ಸ್ವೀಕರಿಸಿ ಅಂಥ ಜೀವನದಲ್ಲಿ ನಾವು ಮಗ್ನರಾಗಿ ಅದರ ಸತ್ಯತೆಯನ್ನು ಸ್ಥಾಪಿಸಬೇಕು.

ಈಗ ವರ್ಣಿಸುತ್ತಿರುವ ಕಾಲದಲ್ಲಿ ನನ್ನ ಸ್ಥಿತಿಯು ಹೇಗಿತ್ತೆಂದರೆ– ನನ್ನ ಕೆಲಸವನ್ನು ಹಗ್ಗದಿಂದಾಗಲಿ, ಪಿಸ್ತೂಲದಿಂದಾಗಲಿ ನಾನು ಕೊನೆಗಾಣಿಸಿ ಬಿಟ್ಟಿರಬಾರದು, ಎಂದು ಆ ಇಡೀ ವರುಷದ ತುಂಬ ಆಲೋಚಿಸುತ್ತಿದ್ದೆನು. ಆದರೆ ಅದರ ಜೊತೆಗೆ ವೇದನಾಪೂರ್ಣವಾದ ಅನಿಸಿಕೆಯೊಂದು ನನ್ನ ಹೃದಯವನ್ನು ಅಂಡಲೆಯುತ್ತಿದ್ದಿತು. ಅದಕ್ಕೆ ನಾನು 'ಈಶ್ವರನಿಗಾಗಿ ತೊಳಲಾಟ'ವೆಂದು ಮಾತ್ರ ಅನ್ನುವೆನು.

ಈಶನ ಅರಸುವಿಕೆಯು ನನ್ನ ವಿಚಾರದ ಕಾರ್ಯವಾಗಿರಲಿಲ್ಲ. ಅದು ಅನಿಸಿಕೆಗೆ ಸಂಬಂಧಿಸಿದ್ದಾಗಿತ್ತು. ತಿರುಗಿ ಕೇಳಿದರೆ ಅದು ನನ್ನ ವಿಚಾರಗಳಿಗೆ ವಿಪರೀತವಾಗಿದ್ದಿತು. ಅದು ನನ್ನ ಹೃದಯದಲ್ಲಿ ಆವಿರ್ಭವಿಸಿತ್ತು ಅಪರಿಚಿತ ರಾಜ್ಯದಲ್ಲಿಯ ಭಯ, ಪರದೇಶಿತನ, ಒಂಟಿಗತನಗಳಂತೆ

ಅದು ಅನಿಸುತ್ತಿದ್ದಿತು ; ಯಾರೋ ಒಬ್ಬರಿಂದ ಸಹಾಯ ಬರುವ ಭರವಸದಂತೆಯೂ ಅದು ಇದ್ದಿತು.

ಈಶ್ವರನ ಅಸ್ತಿತ್ವವನ್ನು ಸಿದ್ಧಮಾಡಿಕೊಡಲು ಶಕ್ಯವಿಲ್ಲವೆಂದು ಸ್ಪಷ್ಟವಾಗಿ ನನಗೆ ಅನಿಸಿದ್ದಿತಾದರೂ, ಮತ್ತು ಇದೇ ಮಾತನ್ನು ತತ್ವವೇತ್ತನಾದ ಕಾಂಟನು ಪ್ರತಿಪಾದಿಸುತ್ತಿದ್ದುದನ್ನು ನಾನು ಅರಿತಿದ್ದೆನಾದರೂ ನಾನಿನ್ನೂ ಆ ದೇವನನ್ನು ಅರಸುತ್ತಿದ್ದೆನು; ಮತ್ತು ಅವನನ್ನು ದೊರಕಿಸುವ ಭರವಸವುಳ್ಳವನಾಗಿದ್ದೆನು. ಮತ್ತು ಮುಂಚಿನ ಸ್ವಭಾವದ ಮೂಲಕ ನಾನು ಈಶ್ವರನ ಪ್ರಾರ್ಥನೆ ಮಾಡುತ್ತಿದ್ದೆನು. ಆದರೆ ನಾನು ಹುಡುಕುತ್ತಿರುವುದು ಮಾತ್ರ ಸಿಗಲಿಲ್ಲ. ಈಶ್ವರನ ಅಸ್ತಿತ್ವವನ್ನು ಸಿದ್ಧಪಡಿಸಲಿಕ್ಕೆ ಆಗದೆಂದು ಹೇಳುವ ಕಾಂಟ್ ಹಾಗೂ ಶೋಪನ್‌ಹಾರ್ ಇವರ ತರ್ಕಗಳನ್ನೂ ಕೂಡ ಮೀರಿ ನಾನು ಒಮ್ಮೆಮ್ಮೆ ಅವುಗಳನ್ನು ಖಂಡಿಸುತ್ತಲೂ ಇದ್ದೆನು. ಮತ್ತು ನಾನು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದುದೇನೆಂದರೆ— ಸ್ಥಾನಕಾಲಗಳಿರುವಂತೆ ಕಾರಣವೂ ಒಂದು ವೈಚಾರಿಕ ಸ್ಥಿತಿಯಾಗಿಲ್ಲದಿರಬಹುದು. ನನ್ನ ಅಸ್ತಿತ್ವವಿರುವುದಾದರೆ ಅದಕ್ಕೆ ಮೂಲವಾದ ಕಾರಣವೊಂದು ಇರಲಿಕ್ಕೆಬೇಕು. ಅದು ಸರ್ವಕಾರಣಗಳಿಗೂ ಮೂಲಕಾರಣವು. ಜಗತ್ತಿನ ಈ ಸರ್ವದರ ಕಾರಣಕ್ಕೇ ಜನರು ಈಶ್ವರನೆಂದು ಅಂದಿರುವರು. ನಾನು ಈ ಮೂಲಕಾರಣವನ್ನು ಅಂದರೆ ಈಶ್ವರನನ್ನು ಅರಿಯಬೇಕೆಂದು ಸರ್ವಾಂತಃಕರಣದಿಂದ ಪ್ರಯತ್ನಿಸಿದೆನು. ಶೀಘ್ರದಲ್ಲಿಯೇ ನನಗೆ ಒಪ್ಪಿಗೆಯಾದದ್ದೇನಂದರೆ— ನಾನು ಯಾವುದರ ಶಕ್ತಿಯಿಂದ ಬದುಕಿರುವೆನೋ ಅಂಥದೊಂದು ಮಹಾಶಕ್ತಿಯು ಇದ್ದಿರಲೇಬೇಕು. ತತಕ್ಷಣದಲ್ಲಿ ನಾನು ಬದುಕಿಕೊಂಡೆನೆಂದು ನನಗೆ ಅನಿಸಿತು. ಆದರೆ— " ಈ ಮೂಲ ಕಾರಣ ಅಥವಾ ಶಕ್ತಿಯೆಂಬುದೇನು? ಅದನ್ನು ನಾನು ಹೇಗೆ ತಿಳಿದುಕೊಳ್ಳುವೆನು? ನನ್ನ ಮತ್ತು ನಾನು ದೇವರೆಂದು ಹೇಳುವ ಅದರ ಸಂಬಧವಾವುದು ? " ಇದಕ್ಕೆ ಅವೇ ಪರಂಪರೆಯ ಉತ್ತರಗಳು ಕಟ್ಟಿ ಇಟ್ಟಿದ್ದವು. ಅವು ಯಾವವೆಂದರೆ— " ಆತನೇ ಸೃಷ್ಟಿಕರ್ತನು. ಮತ್ತು ಆತನೇ ಪಾಲನಕರ್ತನು." ಈ ಉತ್ತರದಿಂದ ನನಗೆ

ಸಮಾಧಾನವಾಗಲಿಲ್ಲ. ನನ್ನ ಜೀವನಾಧಾರವು ಪುನಃ ನನ್ನ ಕೈಯೊಳಗಿಂದ ಕೊಸರಿಕೊಳ್ಳುತ್ತಿದೆಯೆಂದು ನನಗೆ ತೋರಿತು. ಆದರಿಂದ ನಾನು ಭಯಪಟ್ಟು ನಾನರಿಸುತ್ತಿರುವವನನ್ನು ಸಹಾಯದ ಭರವಸದಿಂದ ಪ್ರಾರ್ಥಿಸುತ್ತಿದ್ದೆನು. ಹೆಚ್ಚುಹೆಚ್ಚು ಪ್ರಾರ್ಥನೆ ಮಾಡಿದಂತೆ ಹೆಚ್ಚುಹೆಚ್ಚು ಸ್ಪಷ್ಟವಾಗಿ ಕಂಡುಬಂದದ್ದೇನಂದರೆ— ಆತನು ನನ್ನ ಮರೆಯನ್ನು ಕೇಳಲಿಲ್ಲ; ಇಷ್ಟೇ ಅಲ್ಲ— ಆತನು ಇಲ್ಲವೇ ಇಲ್ಲ. ಹೀಗೆ ನಾನು ದೇವರೆಂಬವನು ಇಲ್ಲವೇ ಇಲ್ಲವೆಂದೆನ್ನುವಂಥ ನಿರಾಶಾಸ್ಥಿತಿಗೆ ಬಂದೊಡನೆ— "ಒಡೆಯನೇ ಕರುಣಿಸು; ನನ್ನನ್ನು ಕಾಪಾಡು. ಪ್ರಭುವೇ! ನನಗೆ ತಿಳಿಸಿಹೇಳು." ಎಂದು ಗೋಳಾಡಿದೆನು. ಆದರೆ ನನ್ನ ಮೇಲೆ ಯಾರಿಗೂ ದಯೆ ಬರಲಿಲ್ಲ. ಹೀಗಾಗಿ ನನ್ನ ಜೀವನವು ಸ್ತಂಭಿತಸ್ಥಿತಿಗೆ ಬಂದಿತು.

ಆದರೆ ತಿರುತಿರುಗಿ ನನಗೆ ಎಲ್ಲ ಮಗ್ಗುಲನಿಂದಲೂ ತೋರಿಬರಹತ್ತಿದ್ದೇನಂದರೆ— ಈ ಜಗತ್ತಿನಲ್ಲಿ ನಾನು ಯಾವಕಾರಣವೂ ಇಲ್ಲದೇ, ಯಾವ ಹೇತುವೂ ಇಲ್ಲದೆ, ಯಾವ ಅರ್ಥವೂ ಇಲ್ಲದೆ ಬಂದಿರಲಾರೆನು. ಒಂದು ಹಕ್ಕಿಯ ಮರಿಯು ತನ್ನ ಗೂಡಿನಿಂದ ಕೆಳಗೆ ಬಿದ್ದಂತೆ ನಾನು ಅಕಸ್ಮಾತ್ತಾಗಿ ಹೇಗೋ ಭೂಮಿಗೆ ಬಿದ್ದಿರಲಾರೆನು. ಹುಲ್ಲುಗಾವಲಿನಲ್ಲಿ ಅಂಗಾತಬಿದ್ದ ಹಕ್ಕಿಯಂತೆ ಹಲಬುತ್ತಿದ್ದೆನು. ಯಾಕೆಂದರೆ ನನಗೊಬ್ಬ ತಾಯಿಯು ಹಡೆದವಳಿದ್ದಾಳೆಂದು ನನಗೆ ಅನಿಸುತ್ತಿದ್ದಿತು. ಅವಳು ತನ್ನೊಳಗಿಂದ ನನ್ನನ್ನು ನಿರ್ಮಿಸಿ, ತತ್ತೀ ಇಟ್ಟು, ಕಾವುಕೊಟ್ಟು, ಮರಿಮಾಡಿ, ಗುಟುಕು ಕೊಟ್ಟು ಲಾಲಿಸಿದ್ದಾಳೆ. ಆ ತಾಯಿಯು ಎಲ್ಲಿದ್ದಾಳೆ? ನಾನು ಪರಿತ್ಯಕ್ತನಾಗಿದ್ದರೆ ಯಾರಿಂದ ತ್ಯಜಿಸಲ್ಪಟ್ಟಿರುವೆನು? ನನ್ನೊಬ್ಬರು ಪ್ರೀತಿಯಿಂದ ಹೆತ್ತಿದ್ದಾರೆಂಬುದನ್ನು ನನ್ನ ಅಂತರಂಗಕ್ಕೆ ಮರೆಮಾಡುವುದು ಶಕ್ಯವಿರಲಿಲ್ಲ. ಆ ಯಾರೋ ಒಬ್ಬರು ಯಾರಾಗಿದ್ದಿರಬಹುದು? ಪುನಃ ಅದೇ ಆ ದೇವರು! ಅಲ್ಲವೇ? ಆತನೇ ನನ್ನ ಒಳಗಿನ ಎಳೆತ, ನನ್ನ ನಿರಾಶೆ, ನನ್ನ ಹೋರಾಟ ಎಲ್ಲವನ್ನೂ ಬಲ್ಲನು. 'ಆತನು ಇದ್ದಾನೆ' ಎಂದು ಅಂದುಕೊಂಡೆನು. ನಾನು ಹೀಗೆ ಒಂದು ಕ್ಷಣಮಾತ್ರ ಭಾವಿಸಿದರೆ ನನ್ನೊಳಗೆ ಒಂದು ಪ್ರಕಾರದ ಹೊಸಜೀವನದ ಸಂಚಾರವೇ

**ಆದಂತಾಯಿತು;** ಬಾಳಿಬದುಕುವುದರ ಶಕ್ಯತೆಯೂ, **ಸಂತಸವೂ** ನನ್ನ ಅನುಭವಕ್ಕೆ ಬಂದವು. ಆದರೆ ತಿರುಗಿ ನಾನು ನನ್ನ ಮತ್ತು ಅವನ ಸಂಬಂಧವನ್ನು ಕುರಿತು ಆಲೋಚಿಸತೊಡಗಿದೆನು. ಕರ್ತನು ತನ್ನ ಮಗ ನಾದ ರಕ್ಷಕನನ್ನು ಲೋಕಕ್ಕೆ ಕಳಿಸಿದನೆಂಬ ಮಾತು, ಮತ್ತು ಆ ದೇವನು ನನ್ನಿಂದಲೂ ಜಗತ್ತಿನಿಂದಲು ತಾನು ವಿವಿಕ್ತನಾಗಿದ್ದಾನೆಂಬ ಇನ್ನೊಂದು ಮಾತು, ಇವುಗಳೊಳಗಿನ ವೈರಸ್ಯವು ನನ್ನ ಭಾವನೆಯನ್ನೆಲ್ಲ ಹಿಮದಕರಣೆ ಯಂತೆ ಕರಿಗಿಸಿ ಬಿಟ್ಟಿತು. ಪುನಃ ನನ್ನೊಳಗಿನ ಜೀವನದ ಸೆಲೆಯು ಬತ್ತಿ ಹೋಯಿತು. ಪುನಃ ನಿರಾಶೆಯು ಸ್ಫೈದೋರಿತು. ಮತ್ತು ನನ್ನನ್ನು ನಾನು ಕೊಂದುಕೊಳ್ಳುವದಕ್ಕಿಂತ ಬೇರೆ ಉಪಾಯವೇ ಇಲ್ಲನೆಂದು ನನಗೆ ಅನಿಸಹತ್ತಿತು. ಆದರೆ ಎಲ್ಲಕ್ಕಿಂತ ಕೆಟ್ಟದ್ದೇನಂದರೆ— ಹಾಗೆ ಮಾಡಲು ನಾನು ಸಮರ್ಥನಿಲ್ಲವೆಂದು ಅನಿಸಿದ್ದು.

ಎರಡು ಸಾರೆಯಲ್ಲ, ಮೂರುಸಾರೆಯಲ್ಲ; ಹತ್ತು ಸಾರೆ, ನೂರು ಸಾರೆ ನಾನು ಇಂಥ ದೆಶೆಗೆ ಬಂದು ಬಂದು ಮುಟ್ಟಿದೆನು. ಮೊದಲಿಗೆ ಹಿಗ್ಗು ಮತ್ತು ಹುರುಪು; ಬಳಿಕ ನಿರಾಶೆ ಮತ್ತು ಬದುಕುವುದರ ಅವಶ್ಯಕತೆ.

ನನಗೆ ನೆನಪಿದೆ— ವಸಂತಾರಂಭದಲ್ಲಿ ಒಂದು ದಿವಸ, ಕಾಡಿನಲ್ಲಿ ನಾನೊಬ್ಬನೇ ಮರಗಳ ಸದ್ದನ್ನು ಆಲಿಸುತ್ತ ಒಂಟಿಗನಾಗಿ ಇದ್ದೆನು. ಹಾಗೆ ಆಲಿಸುತ್ತಿರುವಾಗ ಕಳೆದ ಮೂರು ವರುಷಗಳಿಂದಲೂ ಏಕನಿಷ್ಠೆ ಯಿಂದ ಆಲೋಚಿಸುತ್ತಿದ್ದದ್ದೇ ಈಗಲೂ ತಲೆಯಲ್ಲಿ ನಡೆದಿದ್ದಿತು. ನಾನು ಪುನಃ ದೇವನನ್ನು (ಒಳಗೊಳಗೆ) ಅರಸುತ್ತಲಿದ್ದೆನು. ನಾನು ನನಗೆ ಹೇಳಿಕೊಂಡದ್ದೇನಂದರೆ— ಈಶ್ವರನು ಇಲ್ಲವೆನುವುದೇ ಸರಿಯಾದ ಮಾತು. ಆತನು ನನ್ನ ಕಲ್ಪನೆಯನ್ನುಳಿದು ಇನ್ನೇನೂ ಆಗಿರಲಾರನು. ಆತನ ಅಸ್ತಿತ್ವವಾದರೂ ನನ್ನ ಇಡೀ ಜೀವನದಂತೆಯೇ (ತಾತ್ಪೂರ್ತಿಕ) ಸತ್ಯವಾಗಿರುವದು. ಆತನು ಇರಲಾರನು; ಮತ್ತು ಯಾವ ಅದ್ಭುತಗಳೂ ಆತನ ಅಸ್ತಿತ್ವವನ್ನು ಸಿದ್ಧಪಡಿಸಲಾರವು. ಯಾಕೆಂದರೆ, ಅದ್ಭುತಗಳೇ

ಮೊದಲು ನಮ್ಮ ಕಲ್ಪನೆಗಳಾಗಿರುತ್ತವೆ. ಅಲ್ಲದೆ ಅವು ವಿಚಾರದ ಒರೆಗೆ ಬೇರೆ ಇಳಿಯುವದಿಲ್ಲ.

ಮತ್ತೂ ನಾನು ಆಲೋಚಿಸಿದೆ. ಏನಂದರೆ— ನಾನು ಅರಸುತ್ತಿರುವ ಈಶ್ವರನ ಅನುಭವವು (Perception) ನನಗೆ ಎಲ್ಲಿಯಿಂದ ಬರುತ್ತದೆ? ಹೀಗೆ ವಿಚಾರ ಮಾಡುತ್ತಿರಲು ಪುನಃ ನನ್ನೊಳಗೆ ಜೀವನದ ಆನಂದ ತರಂಗಗಳು ಉಕ್ಕತೊಡಗಿದವು. **ನನ್ನ ಸುತ್ತು ಮುತ್ತಲಿದ್ದುದೆಲ್ಲಾ ಸಜೀವವಾಗಿ ಅರ್ಥವನ್ನು ತಳೆಯಿತು.** ಆದರೆ ನನ್ನ ಆನಂದವು ಬಹಳ ಹೊತ್ತು ತಾಳಲಿಲ್ಲ. ನನ್ನ ಬುದ್ಧಿಯು ತನ್ನ ಕೆಲಸವನ್ನು ಮುಂದುವರಿಸಿತು.

" ದೇವನ ವಿಚಾರವು ದೇವನಾಗಲರಿಯದು. ವಿಚಾರವು ನನ್ನೊಳಗಿನದೇ ಆಗಿರುತ್ತದೆ. ಅದನ್ನು ನಾನು ನನ್ನೊಳಗೆ ಆವ್ಹಾನಿಸಲೂ ಬಲ್ಲೆನು. ಮತ್ತು ವಿಸರ್ಜಿಸಲೂ ಬಲ್ಲೆನು. ನಾನು ಅರಸುತ್ತಲಿರುವುದು ಅದಲ್ಲ. ಯಾವುದರ ಹೊರತು ಜೀವನವೇ ಅಸಂಭವವೋ, ನಾನು ಅರಸುತ್ತಿರುವುದು ಅಂಥದನ್ನು" **ಪುನಃ ನನ್ನ ಸುತ್ತ ಮುತ್ತಲಿನದೆಲ್ಲ ಹಾಗೂ ನನ್ನೊಳಗಿನದೆಲ್ಲ ನಿರ್ಜೀವವಾಗಹತ್ತಿತು.** ಆದ್ದರಿಂದ ತಿರುಗಿ ನನ್ನನ್ನು ನಾನು ಕೊಂದುಕೊಳ್ಳಲು ಅಭಿಲಾಷೆ ಪಟ್ಟೆನು.

ನಾನು ನನ್ನೊಳಗೆ ನಡೆದ ಈ ನೂರಾರು ಸಲದ ಸ್ತಂಭನೋಜ್ಜೀವನಗಳನ್ನು ಕುರಿತು ಲಕ್ಷ್ಯಿಸಲು ನನಗೆ ಅನಿಸಿದ್ದೇನಂದರೆ— ಈಶ್ವರನನ್ನು ನಂಬಿದ ಕ್ಷಣಗಳಲ್ಲಾ ನಾನು ಬದುಕಿಕೊಂಡಿದ್ದೇನೆ. ಆಗಿನಂತೆ ಈಗ ನಾನು ಬದುಕುವುದಕ್ಕೆ ನನಗೆ ಆತನ ಅರಿವು ಇರುವುದು ಅಗತ್ಯವಾಗಿದ್ದು ಆತನನ್ನು ಮರೆತಗಳಿಗೆಯಲ್ಲಿ ನಾನು ಸತ್ತಂತೆಯೇ ಸರಿ.

ಈ ಹಿಗ್ಗು ಕುಗ್ಗುಗಳ ಅರ್ಥವೇನು? ಈಶ್ವರನ ಅಸ್ತಿತ್ವದ ಶ್ರದ್ಧೆ ಹಾರಿದರೆ ನಾನು ಬದುಕಲೇ ಆರೆನು. ಈಶ್ವರನನ್ನು ಅರಿಯಬೇಕೆಂಬ ಆಶೆಯು ಒಂದು ಸಣ್ಣ ಸೆಳಕಾದರೂ ನನ್ನಲ್ಲಿ ಇಲ್ಲದೆ ಹೋಗಿದ್ದರೆ ನಾನು

ಎಂದೋ ಆತ್ಮಹತ್ಯ ಮಾಡಿಕೊಂಡು ಬಹುಕಾಲವಾಗುತ್ತಿತ್ತು. ಆತನ ಅನಿಸಿಕೆಯು ಎಳತವೂ ಇರುವವರೆಗೆ ನಾನು ವಾಸ್ತವವಾಗಿ ಬದುಕ ಬಲ್ಲೆನು. ಹೀಗಿರುವಷ್ಟರಲ್ಲಿ ಒಳಗಿನ ವಾಣಿಯೊಂದು ಕೂಗಿ ಹೇಳಿತು:— " ಹೆಚ್ಚಿಗೇನು ಹುಡುಕುವಿ? ಇವನೇ ಆತನು. ಯಾವ ವಸ್ತುವಿಲ್ಲದೆ ಯಾರೂ ಬದುಕುವದೇ ಶಕ್ಯವಿಲ್ಲವೋ ಅದೇ ಈಶ್ವರ **ಈಶ್ವರ ನನ್ನ-ರಿಯುವುದೂ, ಬದುಕಿರುವುದೂ ಒಂದೇ. ಈಶ್ವರನೇ ಜೀವನ."**

" ಈಶ್ವರನನ್ನು ಅರಸುತ್ತಲೇ ಇರು. ಆಗ ನೀನು ದೇವನನ್ನುಳಿದು ಬಾಳಲೇ ಆರಿ " **ಎಂದೆಂದಿಗಿಂತಲೂ ಹೆಚ್ಚಾಗಿ ಇಂದು ನನ್ನ ಹೊರಗೆ ಮತ್ತು ಒಳಗೆ ಎಲ್ಲಕಡೆಯಲ್ಲಿ ಜ್ಯೋತಿರ್ಮಯವಾಯ್ತು. ಮತ್ತು ಆ ಜ್ಯೋತಿಯು ಪುನಃ ನನ್ನನ್ನು ತ್ಯಜಿಸಲಿಲ್ಲ.**

ಹೀಗೆ ನಾನು ಆತ್ಮಹತ್ಯದ ಕೈಯೊಳಗಿಂದ ಪಾರಾದೆನು. ನನ್ನಲ್ಲಿ ಈ ಬದಲಾವಣೆಯು ಎಂದು - ಹೇಗೆ ಆಯಿತೆಂಬುದನ್ನು ಹೇಳಲಿಕ್ಕೆ ಶಕ್ಯವಾಗದು. ನನಗೆ ಹಿಂದೆ ನಿರಾಶೆಯು ಮೆಲ್ಲಮೆಲ್ಲನೆ ಬೆಳೆಯುತ್ತಬಂದು **ಜೀವನ ಶಕ್ತಿಯು ಹ್ರಾಸವಾದಂತೆ ಈಗ ಅದೇ ರೀತಿಯಿಂದ ಆ ಜೀವನ ಶಕ್ತಿಯು ನನ್ನೊಳಗೆ ಹಿಂದುರಿಗಿ ಬಂದು ಬಿಟ್ಟಿತು.**

ಇದರಲ್ಲೊಂದು ಸೋಜಿಗವೇನಂದರೆ, ನನ್ನೊಳಗೆ ಮರುಳಿ ಬಂದ ಈ ಜೀವನ ಶಕ್ತಿಯು ಹೊಸಪದಾರ್ಥವೇನೂ ಅಲ್ಲ; ಬಹಳ ಹಳೆಯದು. ಯಾಕೆಂದರೆ ಈ ಶಕ್ತಿಯೇ ನನ್ನ ಆರಂಭದ ದಿನಗಳಲ್ಲಿಯೂ ನನ್ನ ಕೈಹಿಡಿದಿದ್ದಿತು.

ನನ್ನ ಬಾಲ್ಯ ಮತ್ತು ಯವ್ವನಕ್ಕೆ ಸಂಬಂಧಿಸಿದುದಕ್ಕೆ ಚೆನ್ನಾಗಿ ಮತ್ತೆ ಮರಳಿ ಬಂದೆನು. ನನ್ನನ್ನು ಹುಟ್ಟಿಸಿ ನನ್ನಿಂದ ನನ್ನ ಕರ್ತವ್ಯ ವನ್ನು ಅಪೇಕ್ಷಿಸುವ ಆ ಮಹಾಸಂಕಲ್ಪದ ಕಡೆಗೆ ನನ್ನ ಶ್ರದ್ಧೆಯು ಹೊರಳಿ ಬಂದಿತು. ನಾನು ಒಳ್ಳೆಯವನು ಆಗಬೇಕು ಎಂದರೆ— ಈಶ್ವರನ ಸಂಕಲ್ಪಾನುಸಾರ ಬದುಕಿ ಬಾಳಬೇಕು. ಇದೇ ನನ್ನ ಜೀವನದ

ಉದ್ದೇಶವೆಂಬ ಮುಖ್ಯ ಶ್ರದ್ಧೆಗೆ ನಾನು ಪುನಃ ಹೊರಳಿ ಬಂದೆನು. ಮಾನವ ಜಾತಿಯು ತಾನು ಬದುಕಿ ಬಾಳುವ ಸಲುವಾಗಿ ಸಾವಿರಾರು ವರುಷಗಳ ಪ್ರಯತ್ನದಿಂದ ನಿರ್ಧರಿಸಿಕೊಂಡು ಹೇಳಿಕೊಟ್ಟ ಆ ದೇಶ ಗಳಲ್ಲಿ ಈಶ್ವರನ ಸಂಕಲ್ಪವೂ ಸಂಕಲಿತವಾಗಿದೆ, ಎಂಬ ಶ್ರದ್ಧೆಗೆ ಬಂದೆನು, ಒಟ್ಟಿನಮೇಲೆ ಈಶ್ವರನ ಅಸ್ತಿತ್ವವನ್ನೂ, ನೈತಿಕಪರಿಪೂರ್ಣತೆಯನ್ನೂ ಜೀವನದ ಅರ್ಥವನ್ನು ಸೂಚಿಸುವ ಪೌರಾಣಿಕ ಕಥೆಯುಗಳನ್ನೂ ಒಡಂಬ ಡುವವನಾದೆನು. ವ್ಯತ್ಯಾಸವಿಷ್ಟೇ— ಮೊದಲು ನಾನು ಅರಿಯದೆ ಇವುಗಳನ್ನು ಒಪ್ಪಿಕೊಳ್ಳುತ್ತಿದ್ದೆ. ಆದರೆ ಈಗ ಇವುಗಳ ಹೊರತು ಬಾಳಿ ಬದುಕುವುದೇ ಅಸಂಭವವೆಂದು ನನಗೆ ತಿಳಿಯಿತು.

ನನಗಾದದ್ದೇನೆಂಬುದು ಒಂದುಷ್ಟು ಇದರಂತಿದ್ದಿತು: ಅದು ಹೇಗೆಂದರೆ— " ನಾನೊಂದು ನೌಕೆಯಲ್ಲಿ ಕುಳ್ಳಿರಿಸಲ್ಪಟ್ಟಿದ್ದೆನು. (ಆದರೆ ಎಂದೆಂಬುದನ್ನರಿಯೆನು.) ಗೊತ್ತಿಲ್ಲದ ಒಂದು ದಂಡೆಯಿಂದ ನನ್ನನ್ನು ದೂಡಿಬಿಟ್ಟಿದ್ದಾರೆ. ನನಗೆ ಆಚೆಯ ದಂಡೆಯ ಕಡೆಗೆ ದಿಶೆಯನ್ನು ತೋರಿಸಿ, ನೌಕೆಯನ್ನು ನಡಿಸುವ ಹುಟ್ಟುಗಳನ್ನು ರೂಢಿಯಿಲ್ಲದ ನನ್ನ ಕೈಯಲ್ಲಿ ಕೊಟ್ಟು, ಒಬ್ಬನನ್ನೇ ಬಿಟ್ಟುಕೊಟ್ಟಿದ್ದಾರೆ. ನಾನು ನನ್ನ ಕೈಯಿಂದಾದಷ್ಟು ಚೆನ್ನಾಗಿ ಹುಟ್ಟನ್ನು ಹಾಕಿ ಮುಂದಕ್ಕೆ ಚಲಿಸಿದೆನು. ಆದರೆ ನಡುಹೊಳೆಗೆ ಹೋದ ಹೋದ ಬಳಿಕ ಪ್ರವಾಹದ ಕಸುವು ಹೆಚ್ಚಾದ್ದರಿಂದ ನನ್ನ ಗುರಿಯನ್ನು ಕಳೆದುಕೊಂಡೆನು. ನಾನು ನನ್ನಂತೆ ಸೆಳವಿಗೆ ಬಿದ್ದವರನ್ನು ನೋಡಿದೆನು. ಕೆಲವರು ಹುಟ್ಟು ಹೊಡೆಯು ತ್ತಿದ್ದರು. ಬೇರೆ ಕೆಲವರು ಕೈಬಿಟ್ಟು ಕುಳಿತಿದ್ದರು. ಅಸಂಖ್ಯಜನರಿಂದ ತುಂಬಿಹೋಗಿರುವ ದೊಡ್ಡ ದೊಡ್ಡ ನೌಕೆಗಳೂ, ಹಡಗಗಳೂ ಅವೆಷ್ಟೋ ಗಂಟುಬಿದ್ದಿದ್ದವು. ಕೆಲವರು ಪ್ರವಾಹಕ್ಕೆ ಪ್ರತಿಭಟಿಸುತ್ತಿದ್ದಾರೆ. ಇನ್ನು ಕೆಲವರು ಅದರೊಡನೆ ತೇಲಿ ಹೋಗುತ್ತಿದ್ದಾರೆ. ನಾನು ಮುಂದೆ ಮುಂದೆ ಹೋದಂತೆ ನನಗೆ ಹೇಳಿಕೊಟ್ಟ ಹಾದಿಯ ನೆನಪು ಹಾರಹತ್ತಿತು. ನಡುಸೆಳವಿನಲ್ಲಿ ನನ್ನ ಸುತ್ತಲು ಅಸಂಖ್ಯ ನೌಕೆಗಳು ಪ್ರವಾಹದ ಪಾಲಾಗುತ್ತಿರುವುದನ್ನು ಕಂಡಾಗ ನಾನೆಲ್ಲಿಗೆ ಹೋಗುವುದೆಂಬದನ್ನು

ಪೂರಾ ಮರೆತು, ಅತ್ಯಂತ ನಿರಾಶೆಯಿಂದ ಕೈಯೊಳಗಿನ ಹುಟ್ಟನ್ನು ಬಿಟ್ಟುಕೊಡುತ್ತಿದ್ದೆನು. ಸುತ್ತುಮುತ್ತಲಿನ ನೌಕೆಗಳಲ್ಲಿ ನಗೆಮೊಗದಿಂದ ಪ್ರವಾಹದೊಂದಿಗೆ ಹುಟ್ಟು ಹೊಡೆಯುವವರು ನನಗೆ ಕೂಗಿ ಹೇಳುತ್ತಿದ್ದದ್ದೇನಂದರೆ— "ಬೇರೆ ಮಾರ್ಗವೇ ಇನ್ನಾವುದೂ ಇರಲಾರದು." ನಾನು ಅದನ್ನು ನಂಬಿ ಅವರೊಡನೆ ತೇಲುತ್ತ ನಡೆದೆನು. ನಾನು ಬಹುದೂರದ ವರೆಗೆ ಸೆಳೆಯಲ್ಪಟ್ಟೆನು. ಅಲ್ಲಿ ಸೆಳವಿನ ರಭಸವು ಅಸದಳವಾಗಿದ್ದಿತು. ನನಗಾಗ ನೌಕೆಗಳು ಒಡೆದ ಚೂರು ಚೂರಾದ ಸಪ್ಪಳವು ಕೇಳಿಸಹತ್ತಿತು. ಆಗ ನನಗೆ ಭ್ರಮೆಯಾದಂತಾಯಿತು. ನನ್ನ ಇದಿರಿಗೆ ಪ್ರಳಯದ ಹೊರತು ಇನ್ನೇನೂ ಕಾಣಲಿಲ್ಲ. ಎಲ್ಲೆಲ್ಲಿಯೂ ರಕ್ಷಣೆವೆಂಬುದೇ ನನಗೆ ತೋರಲಿಲ್ಲ. ನಾನೇನು ಮಾಡಬೇಕೆಂಬುದೇ ನನಗೆ ತಿಳಿಯದಾಯಿತು ಆದರೆ ಹಿಂದಿರುಗಿ ನೋಡಿದರೆ, ಅವೆಷ್ಟೋ ನೌಕೆಗಳು ಕಡುತರದ ಸಾಹಸದಿಂದ ಸೆಳವನ್ನು ದಾಟುತ್ತಲಿದ್ದದ್ದು ಕಣ್ಣಿಗೆ ಬಿತ್ತು. ಈಗ ನನಗೆ ಆಚೆಯದಡ, ಅದರದಿಶೆ ಮತ್ತು ಹುಟ್ಟುಗಳು ಇವೆಲ್ಲವುಗಳ ನೆನಪಾಯಿತು. ಅಲ್ಲಿಂದ ನಾನು ಪ್ರವಾಹಕ್ಕೆ ವಿರುದ್ಧವಾಗಿ ಹಿಂದಕ್ಕೆ ನೌಕೆಯನ್ನು ನಡಿಸಿ, ದಂಡೆಗಾಣುವುದಕ್ಕೆ ಮೊದಲು ಮಾಡಿದೆನು.

ಆಚೆಯ ದಂಡೆಯೆಂದರೆ ಈಶ್ವರ; ದಿಶೆಯೆಂದರೆ ಪುರಾತನ ಶ್ರದ್ಧೆ; ಹುಟ್ಟೆಂದರೆ ದೇವನನ್ನು ಕೂಡುವುದಕ್ಕೆಂದು ದೇವನೇ ಮಾನವನಿಗೆ ಕೊಟ್ಟ ಸ್ವಾತಂತ್ರ್ಯ. **ಹೀಗೆ ಜೀವನ ಶಕ್ತಿಯು ನನ್ನಲ್ಲಿ ಪುನರುಜ್ಜೀವಿತವಾಯಿತು. ನಾನು ಪುನಃ ಬಾಳಲು ಅರ್ಹನಾದೆನು.**

---

# ೧೩. ದಿಶಾಪರಿವರ್ತನ.

ನಾನು ನನ್ನ ವರ್ಗದ ಜನರ ಜೀವನವನ್ನು ಬಿಟ್ಟುಕೊಟ್ಟೆ. ಯಾಕೆಂದರೆ ಅವರದು ಜೀವನವೇ ಅಲ್ಲ; ಪರೋಪ ಜೀವನವೆಂದು ಮೊದಲೇ ಹೇಳಿಬಿಟ್ಟಿದ್ದೇನೆ. ನಾನು ದುಡಿಮೆಗಾರರ ಜೀವನವನ್ನು ಅನುಸರಿಸಿ ನಡಕೊಳ್ಳತೊಡಗಿದೆ. ಯಾಕೆಂದರೆ ಅವರ ಜೀವನದಿಂದಲೇ ಜಗತ್ತಿನ ಜೀವನ. ರಶಿಯದ ಜನರೊಡನೆಯೇ ನನ್ನ ವ್ಯವಹಾರ ವಿದ್ದು ದರಿಂದ ನನ್ನ ಸುತ್ತಮುತ್ತಲೆಲ್ಲಾ ವ್ಯಾಪಿಸಿದ್ದ ಆ ಜನಸಾಮಾನ್ಯರ ಜೀವನದ ಬಗೆಗೇ ನಾನಿಲ್ಲಿ ಹೇಳುತ್ತೇನೆ. ಅವರು ತಿಳಕೊಂಡಿರುವ ಜೀವನದ ಅರ್ಥವನ್ನಿಲ್ಲಿ ಬಣ್ಣಿಸುತ್ತೇನೆ:—

ನಾವೆಲ್ಲಾ ಜನರು ಜಗತ್ತಿನಲ್ಲಿ ಈಶ್ವರಾಜ್ಞೆಯಿಂದ ಬಂದಿದ್ದೇವೆ. ಈಶ್ವರನು ಮನುಷ್ಯರನ್ನು ಸ್ವತಂತ್ರರನ್ನಾಗಿ ಮಾಡಿಬಿಟ್ಟಿದ್ದಾನೆ. ತನ್ನ ಆತ್ಮವನ್ನು ಕೆಡಿಸಿಕೊಳ್ಳುವುದಕ್ಕೂ ಸುಧಾರಿಸಿಕೊಳ್ಳುವದಕ್ಕೂ, ಮಾನವನಿಗೆ ಅಧಿಕಾರವಿದೆ. ಆತ್ಮನನ್ನು ಪವಿತ್ರವಾಗಿಟ್ಟುಕೊಂಡಿರುವುದೇ ಮಾನವ ಜೀವನದ ಉದ್ದೇಶವು. ಇದನ್ನು ಸಾಧಿಸುವದಕ್ಕೆ ಅವಶ್ಯವಾದುದೇನೆಂದರೆ— ಮನುಷ್ಯನು ಈಶ್ವರನ ಸಂಕಲ್ಪದಂತೆ ನಡಕೊಳ್ಳುವುದು. ಭೋಗವಿಲಾಸಗಳನ್ನು ಬದಿಗಿರಿಸಿ ನಾವು ದುಡಿಯುವವರೂ, ವಿನಯಶೀಲರೂ, ಉದಾರರೂ, ಕಷ್ಟಸಹಿಷ್ಣುಗಳೂ ಆದರೆ ಈಶ ಸಂಕಲ್ಪವನ್ನು ಪಾಲಿಸದಂತಾಗುತ್ತದೆ. ದುಡಿಮೆಗಾರರು ಜೀವನ ಸಮಸ್ಯೆಗೆ ಇದೇ ಅರ್ಥವನ್ನು ಕಲ್ಪಿಸಿಕೊಂಡಿದ್ದಾರೆ. ಅವರ ಧರ್ಮೋಪದೇಶಕರಲ್ಲಿಯೂ, ಅವರಲ್ಲಿಯೂ ಪ್ರಚಲಿತವಾಗಿರುವ ಕಥೆ—ಕಥನಗಳೂ, ಇದೇ ಅರ್ಥವನ್ನು ಪುಷ್ಟೀಕರಿಸುತ್ತವೆ. ಜೀವನದ ಈ ಅರ್ಥವು ನನಗೆ ಶುದ್ಧವೂ, ಪ್ರಿಯಕರವೂ, ಎಂದೆನಿಸಿತು. ಇಂಥ ಧರ್ಮ ಮತ್ತು ಶ್ರದ್ಧೆಗಳಲ್ಲಿ ನನಗೆ ರುಚಿಸಿದ ಅವೆಷ್ಟೋ ಮೂಢ ಶ್ರದ್ಧೆಗಳೂ ಬೆರೆತು ಹೋಗಿವೆ. ಅವುಗಳನ್ನು ಬೇರ್ಪಡಿಸಲೂ ಶಕ್ಯವಿಲ್ಲ. ಉದಾಹರಣಾರ್ಥ

ವಾಗಿ, ವ್ರತನಿಯಮಗಳನ್ನು ಪಾಲಿಸುವುದು, ಮೂರ್ತಿಗಳ ಮುಂದೆ ಮಣಿಯುವುದು ಇತ್ಯಾದಿ. ನನಗೆ ದುಡಿಮೆಗಾರರ ಶ್ರದ್ಧೆಯಲ್ಲಿಯೂ ಬಹಳ ಮಾತುಗಳು ಅವೈಜಾರಿಕವಾಗಿ ತೋರಿದವು. ಆದರೆ ನಾನು ಅವರ ಪ್ರತಿಯೊಂದು ಮಾತನ್ನು ಒಪ್ಪಿಕೊಂಡೆನು. ಹಾಗೂ ಪ್ರತಿದಿನ ದೇವಾಲಯಕ್ಕೆ ಹೋಗಹತ್ತಿದೆನು. ಸಂಜೆ–ಮುಂಜಾವುಗಳ ಪ್ರಾರ್ಥನೆಗಳನ್ನೂ, ವ್ರತಾದಿಗಳನ್ನೂ ಮಾಡಹತ್ತಿದೆನು. ನನ್ನ ಹೃದಯವು ಮೊದಲನೇ ಸಲವೇ ನನಗೆ ಹೇಳಬಿಟ್ಟದ್ದಿತು.— ಈ ಮಾತುಗಳಲ್ಲಿ ಒಂದೂ ಆಕ್ಷೇಪವು ಯೋಗ್ಯವಲ್ಲವೆಂದು, ಮುಂಚೆ ಅಸಂಭವವಾಗಿ ತೋರು ವಂಥ ವಿಚಾರಗಳು ಇಂದು ಒಳ್ಳೆಯವೆಂದು ಅನಿಸಹತ್ತಿದವು.

ಧಾರ್ಮಿಕ ಶ್ರದ್ಧೆಗಳ ಬಗೆಗೆ ನನ್ನಲ್ಲಿದ್ದ ಮುಂಚಿನ ವಿಚಾರಗಳು ಇಂದು ತುಂಬಾ ಬದಲಾಗಿ ಬಿಟ್ಟಿವೆ. ಬುದ್ಧಿಯು ಒಪ್ಪಿಕೊಳ್ಳದ ಹಾಗೂ ಜೀವನದಲ್ಲಿ ಪ್ರತ್ಯಕ್ಷ ಸಂಬಂಧವಿಲ್ಲದ ವಿಶ್ವಾಸವೆ ಶ್ರದ್ಧೆಯೆಂದು ಮೊದಲು ನಾನು ತಿಳಕೊಂಡಿದ್ದೆ. ಮೊದಮೊದಲು ಶ್ರದ್ಧೆಯ ಅರ್ಥವನ್ನಿಷ್ಟು ಅರಿತುಕೊಳ್ಳಬೇಕೆಂದು ಪ್ರಯತ್ನಿಸಿದೆ. ಆದರೆ ಅದು ನನ್ನ ತಿಳುವಳಿಕೆಗೆ ನಿಲುಕದಿರಲು ನಾನದರ ಆಶೆಯನ್ನು ಪೂರಾಬಿಟ್ಟುಕೊಟ್ಟೆ. ಇಂದು ಇದಕ್ಕೆ ವಿಪರೀತವಾದ ವಿಚಾರಗಳು ನನ್ನಲ್ಲಿವೆ. ಅದು ಹೇಗೆಂದರೆ— ಶ್ರದ್ಧೆಯಿಲ್ಲದೆ ಜೀವನವೇ ಶಕ್ಯವಿಲ್ಲ. ಶ್ರದ್ಧೆಯಿಂದಲೇ ಜೀವನದ ತೊಡಕು ಬಿಚ್ಚಬಲ್ಲದು. ಆದರೆ ಮೊದಲು ತಿಳಕೊಂಡಿದ್ದೆ— ಶ್ರದ್ಧೆಯು ವ್ಯರ್ಥವೆಂದು. ಈಗಾದರೂ ಅದರ ಅರ್ಥವನ್ನು ಸಂಪೂರ್ಣವಾಗಿ ತಿಳಿಯೆನಾದರೂ ಅದರಲ್ಲೇನೋ ಸತ್ಯಾಂಶವಿದೆಯೆಂದು ಬಲ್ಲೆನು. ಮತ್ತು ಆ ಸತ್ಯಾಂಶವನ್ನು ಅರಿಯುವುದರಲ್ಲಿದ್ದೇನೆ.

ನಾನು ನನ್ನ ಹೃದಯದಲ್ಲಿ ಈ ಪ್ರಕಾರ ವಾದವಿವಾದಗಳನ್ನು ನಡಿಸಿದೆನು. ಶ್ರದ್ಧೆಯೂ ಮಾನವನ ದೇಹಬುದ್ಧಿಗಳಂತೆ ಈಶನಿರ್ಮಿತವೇ ಆಗಿದೆ. ಈಶ್ವರನು ಮನುಷ್ಯ ಶರೀರವನ್ನು ರಚಿಸಿದಂತೆ ಅವನ ಬುದ್ಧಿಯನ್ನು ನಿರ್ಮಿಸಿದ್ದಾನೆ. ಶ್ರದ್ಧೆಯ ನೆಲೆಯು ಈಶ್ವರನೇ. ಬೇರೆ

ಬೇರೆ ಜನರು ತಮ್ಮ ಶ್ರದ್ಧೆಗಳನ್ನು ಬೇರೆಬೇರೆಯಾಗಿ ಪ್ರಕಟಗೊಳಿಸುವುದು ಸಹಜವೆ. ನನಗವುಗಳಲ್ಲಿ ಏನೋ ಭ್ರಮೆಯಿದೆಯೆಂದೆನಿಸಿದಾಗ ನನ್ನ ಬುದ್ಧಿಯೇ ಇನ್ನೂ ಅಲ್ಲಿಯವರೆಗೇರಿಲ್ಲವೆಂದು ತಿಳಕೊಳ್ಳ ಹತ್ತಿದೆನು.

ಶ್ರದ್ಧೆಯಿಂದ ಸಾಗಿದರೆ ಜೀವನಸಮಸ್ಯೆಯು ತಾನೇ ಬಿಚ್ಚಿ ಹೋಗುವದು, ಎಂದು ನಾನು ಎಣಿಸಿದೆ. ನಾನೇಕೆ ಬದುಕಿದ್ದೇನೆ, ನನ್ನ ಜೀವನದ ಪರಿಣಾಮವೇನು? ಎಂದು ಯಾರು ಸಂದೇಹಪಟ್ಟರೂ ಶ್ರದ್ಧೆಯು ಒಂದೇ ಉತ್ತರವನ್ನು ಹೇಳಬಲ್ಲದು. ಮರಣಕಾಲದಲ್ಲಿ ಸಹ ಭೋಗವಿಲಾಸದ ಸಾಮಗ್ರಿಗಳ ನಡುವೆ ಇರುವ ಚಕ್ರವರ್ತಿಯಲ್ಲಿ ಈ ಪ್ರಶ್ನವೇಳಲಿ, ಅಥವಾ ಮುಪ್ಪಿನ ದುಡಿತದಾಳಿನಲ್ಲಿ ಏಳಲಿ, ಯಾರಲ್ಲಿ ಎದ್ದರೂ ಶ್ರದ್ಧೆಯು ಕೊಡುವ ಉತ್ತರವು ಅದೇ. ಆ ಸಂದೇಹವು ತಿಳುವಳಿಕೆಯಿಲ್ಲದ ಹುಡುಗನಲ್ಲಿ ಉಂಟಾದರೂ, ನರೆಗೂದಲಿನ ತತ್ತ್ವವೇತ್ತನಲ್ಲಿ ಉಂಟಾದರೂ ಅದೇ ಉತ್ತರ. ಬೆನ್ನುಬಾಗಿದ ಹಣ್ಣು ಮುದುಕೆ ಕೇಳಿದರೇನು, ತುಂಬುಜವ್ವನದ ತರುಣಿ ಕೇಳಿದರೇನು ಶ್ರದ್ಧೆ-ಕೊಡುವ ಉತ್ತರವು ಅದೊಂದೇ. ಈ ಉತ್ತರವು ಮನುಷ್ಯನ ಪರಿಸ್ಥಿತಿಯನ್ನು ಅನುಸರಿಸಿ, ತೋರಿಕೆಯಲ್ಲಿ ಬೇರೆ ಬೇರೆ ಅನಿಸಿದರೂ ವಾಸ್ತವದಲ್ಲಿ ಭೇದವಿರದು. ಸಾಮಾನ್ಯ ಜನರೊಡನೆ ಸಂಪೂರ್ಣ ಬೆರೆತು ಹೋಗಬೇಕೆಂದೂ, ಧರ್ಮಾಚಾರಗಳನ್ನು ಕೂಡ ಅವರಂತೆಯೇ ಮಾಡಬೇಕೆಂದೂ ನನ್ನ ಹೃದಯದ ಇಚ್ಛೆ ಇತ್ತು. ಆದರೆ ಹಾಗೆ ಮಾಡಿದರೆ ನಾನು ಪವಿತ್ರವಾದವುಗಳೆಂದು ಇಟ್ಟುಕೊಂಡ ಮಾತುಗಳನ್ನು ಕುಚೇಷ್ಟೆಗೀಡುಮಾಡಿದಂತಾಗುತ್ತದೆಂದು ನನಗೆ ತೋರಿತು. ಈ ಹೊತ್ತಿಗೆ ಆಧುನಿಕ ರಶಿಯದ ಪಾರಮಾರ್ಥಿಕ ಲೇಖಕರಿಂದ ನನಗೆ ತಾರಣವಾಯ್ತು.

ಈ ಮಹಾನುಭಾವರ ವಿಚಾರದಂತೆ ನಾವು ಒಪ್ಪಬೇಕಾದ ಎಲ್ಲಕ್ಕೂ ಮೊದಲನೇ ಸಿದ್ಧಾಂತವೇನಂದರೆ— ದೇವಾಲಯವು ಸತ್ಯದ ತಳಬೇರು. ಧರ್ಮ ಹೇಳುವುದೆಲ್ಲಾ ಸರಿಯಿರುತ್ತದೆ. ಶ್ರದ್ಧೆಯನ್ನಿಡುವ ಪ್ರೇಮಿಗಳ

ಸಂಸ್ಥೆಯೆಂದು ಹೇಳಿಸಿಕೊಳ್ಳುವ ದೇವಾಲಯುವು ನನ್ನ ಶ್ರದ್ಧೆಯ ಪ್ರಥಮಸ್ಥಾನವೆಂದು ಗೋತ್ತಾದ ಬಳಿಕ " ದೈವೀ ಸತ್ಯವು ಸಂಘಕ್ಕೆ ಸೇರದ ಯಾವುದೊಂದು ಪ್ರತ್ಯೇಕ ವ್ಯಕ್ತಿಗೆ ಪ್ರಾಪ್ತವಾಗಲಾರದೆಂ''ದು ನಾನು ಪ್ರತಿಪಾದಿಸತೊಡಗಿದೆನು. ಸರ್ವಮಾನವ ಸಮಾಜವನ್ನು ಪ್ರೇಮಬಂಧನದಿಂದ ಕಟ್ಟಿಹಾಕಿದ ಆ ಸತ್ಯವು ಅಂಥ ಸಂಘ ಜೀವಿಗೆ ಮಾತ್ರ ಪ್ರಾಪ್ತವಾಗಬಲ್ಲದು. ಅಂತೇ ಸತ್ಯವನ್ನರಿಯಬೇಕಾದರೆ ನಾವು ಭೇದ ಹುಟ್ಟಿಸುವ ಮಾತುಗಳನ್ನೆಲ್ಲಾ ದೂರೀಕರಿಸಬೇಕು. ಮತ್ತು ನಮಗೆ ಅರುಚಿಕರವಾದವುಗಳನ್ನು ಸಮಾಜದ ಪ್ರೀತಿಗಾಗಿ ಸಹನ ಮಾಡಿಕೊಳ್ಳಬೇಕು. ಸತ್ಯವು ಪ್ರೇಮದಿಂದ ಪ್ರಕಟವಾಗುತ್ತದೆ. ಒಟ್ಟಾರೆ ನಾವು ದೇವಾಲಯದ ಆದೇಶಗಳನ್ನು ಪಾಲಿಸಿದದ್ದರೆ ಪ್ರೇಮವು ಲಯವಾಗುವದು. ಸತ್ಯವು ಲೋಪವಾಗುವದು.

ಈ ತರ್ಕಪದ್ಧತಿಯಲ್ಲಿ ಹುದುಗಿದ್ದ ಸೂಕ್ಷ್ಮದೋಷಗಳು ನನಗೆ ಆಗ ತಿಳಿಯಲಿಲ್ಲ. ಆ ಸಮಯಕ್ಕೆ ಸನಾತನ ಕ್ರಿಸ್ತೀ ದೇವಾಲಯದ ಸಿದ್ಧಾಂತಗಳನ್ನು— ಅವುಗಳಲ್ಲೆ ಷ್ಟೋ ಮಾತುಗಳ ಬಗ್ಗೆ ನನಗೆ ತಿಳುವಳಿಕೆಯಿಲ್ಲದೆಯೂ ಕೂಡ— ನಾನು ಒಪ್ಪಿಕೊಂಡೆನು. ನಾನು ತರ್ಕವಿತರ್ಕಗಳಿಂದ ತಲೆ ತಪ್ಪಿಸಿ ಕೊಳ್ಳಲಿಕ್ಕೆ ಪ್ರಯತ್ನಿಸುತ್ತಿದ್ದೆನು. ಮತ್ತು ದೇವಾಲಯದ ತತ್ತ್ವಗಳನ್ನೆಲ್ಲ ಶಕ್ಯವಿದ್ದಷ್ಟು ತರ್ಕಶುದ್ಧವಾಗಿ ವಿವರಿಸಲು ಹೆಣಗುತ್ತಿದ್ದೆನು.

ಸನಾತನ ದೇವಾಲಯ ಸಿದ್ಧಾಂತಗಳ ಮೇಲೆ ಶ್ರದ್ಧೆಯಿಟ್ಟು ನಾನು ಪೂರ್ವ ಕಥೆಗಳಂತೆ ನಡಕೊಳ್ಳಲು ಆರಂಭಿಸಿದೆ. ಹೀಗೆ ನಾನು ನನ್ನ ಹಿರಿಯರ ಹಾಗೂ ತಾಯ್ತಂದೆಗಳ ಧರ್ಮದಲ್ಲಿ ಸಮ್ಮಿಲಿತನಾಗಿ ಹೋದೆನು. ಅದರಲ್ಲಿ ನನಗಾವ ಕೆಟ್ಟಕೆಲಸಗಳೆನಿಸಲಿಲ್ಲ. ಏಕೆಂದರೆ, ನನ್ನ ವಿಚಾರದಲ್ಲಿ ವಿಷಯವಾಸನೆಯೊಳಗೆ ನಿಮಗ್ನನಾಗುವುದೊಂದೇ ಕೆಟ್ಟಕೆಲಸವೆಂದಿತ್ತು. ಮುಂಜಾನೆ ನಾನು ನನ್ನ ಧಾರ್ಮಿಕ ಕೃತ್ಯಗಳನ್ನು ಮಾಡುವುದಕ್ಕಾಗಿ ಎದ್ದಾಗ ನನಗನಿಸುತ್ತಿದ್ದುದೇನೆಂದರೆ— ನನ್ನ ಪೂರ್ವಜರ ಆತ್ಮವನ್ನು

ಆನಂದಗೋಸಲಿಕ್ಕೇ ಆಗಲಿ, ಜೀವನ ಸಮಸ್ಯೆಯನ್ನು ಅರಿತುಕೊಳ್ಳ ಲಿಕ್ಕೇ ಆಗಲಿ ಎಲ್ಲಾ ಒಳ್ಳೆಯದನ್ನೇ ಮಾಡುತ್ತಿರುವೆನು. ಈ ಕೆಲಸದ ಸಲುವಾಗಿ ನಾನು ನನ್ನ ವ್ಯಕ್ತಿಗತಸುಖಕ್ಕೆ ಶರಣು ಹೊಡೆದಿದ್ದೆ. ಪ್ರಾರ್ಥನೆ ಮಾಡಲಿಕ್ಕೆಂದು ನೆಲದ ಮೇಲೆ ಬಾಗಿನಿಂತಾಗಲೂ, ವ್ರತಾದಿ ಗಳನ್ನು ನಡಿಸುತ್ತಿದ್ದಾಗಲೂ, ನನ್ನ ಸ್ಥಿತಿಯು ಹೀಗೆ ಆಗುತ್ತಿತ್ತು. ನನ್ನ ಹೆಮ್ಮೆಯು ಅದರಿಂದ ಅಳಿದು ಹೋಗಲೆಂದು ನಾನು ಹಾರಯಿ ಸುತ್ತಿದ್ದೆನು. ನಾನು ಪ್ರಾರ್ಥನೆಯ ಸಮಯವನ್ನು ಯಾವಾಗಲೂ ಲಕ್ಷ್ಯದಲ್ಲಿಟ್ಟುಕೊಂಡಿರುತ್ತಿದ್ದೆನು. ದೇವಾಲಯದಲ್ಲಿ ಉಪದೇಶವನ್ನು ಕೇಳುತ್ತಿದ್ದಾಗ ಪ್ರತಿಯೊಂದು ಶಬ್ದದ ಕಡೆಗೆ ತುಂಬಾ ಲಕ್ಷ್ಯಗೊಡು ತ್ತಿದ್ದೆನು. ಮತ್ತು ನನ್ನ ಬುದ್ಧಿಗನುಸಾರವಾಗಿ ಅದರ ಅರ್ಥವನ್ನು ತಿಳಕೊಳ್ಳಲಿಕ್ಕೆ ಪ್ರಯತ್ನಿಸುತ್ತಿದ್ದೆ. ಉಪದೇಶಗಳಲ್ಲಿ ನನ್ನ ಮೇಲೆ ಎಲ್ಲಕ್ಕೂ ಹೆಚ್ಚಾಗಿ ಪರಿಣಾಮವನ್ನು ಉಂಟು ಮಾಡಿದ ಮಾತು ಯಾವುದೆಂದರೆ—

"**ನಾವು ಸರ್ವರನ್ನೊಡಗೂಡಿ ಆತನನ್ನು ಪ್ರೀತಿಸಬೇಕು.**" ಇದರ ತರುವಾಯದ ವಾಕ್ಯವಾದ— "ದೇವರು, ಯೇಸುಕ್ರಿಸ್ತ ಮತ್ತು ಪವಿತ್ರಾತ್ಮ ಇವುಗಳಲ್ಲಿ ಶ್ರದ್ಧೆಯಿಡಬೇಕು." ಇದನ್ನು ಬಿಟ್ಟುಕೊ ಡುತ್ತಿದ್ದೆ. ಯಾಕೆಂದರೆ ಅದರ ಅರ್ಥವೇ ನನಗೆ ಆಗುತ್ತಿರಲಿಲ್ಲ.

---

ನಾನು ವರ್ಣಿಸುತ್ತಿರುವ ಕಾಲಕ್ಕೆ ದೇಶವು ಯುದ್ಧದಲ್ಲಿ ತೊಡಗಿ ಬಿಟ್ಟಿತು. ಮತ್ತು ರಶಿಯದವರು ತಮ್ಮ ಬಾಂಧವರನ್ನು ಧಾರ್ಮಿಕ ಪ್ರೇಮದ ಹೆಸರಿನಿಂದ ಕೊಲೆಮಾಡಲಾರಂಭಿಸಿದ್ದರು. ಇಂಥ ಸಂಗತಿಗಳನ್ನು ಕುರಿತು ವಿಚಾರ ಮಾಡದೆ ಇರುವುದು ಅಸಂಭವವು. ಇಂಥ ಸಂಹಾರ ವನ್ನು ಅಲಕ್ಷಿಸುವುದೆಂದರೆ, ಧರ್ಮದ ಮೂಲ ತತ್ವಗಳನ್ನೇ ಅಸಡ್ಡೆ ಮಾಡಿದಂತಾಗುವದು. ಮೇಲಾಗಿ ಪ್ರಾರ್ಥನಾಮಂದಿರಗಳಲ್ಲಿ ತಮ್ಮ ಪಕ್ಷಕ್ಕೆ ವಿಜಯವಾಗಲೆಂದು ಪ್ರಾರ್ಥನೆ ಮಾಡುತ್ತಿದ್ದರು. ಮತ್ತು ಉಪದೇಶಕರು ರಕ್ತಪಾತವನ್ನು ಧರ್ಮವೆಂದು ಬೋಧಿಸುತ್ತಿದ್ದರು. ಬರೇ ರಣಭೂಮಿಯ ಮೇಲಿನ ಕೊಲೆಗಷ್ಟೇ ಇವರು ಉಪದೇಶಿಸುತ್ತಿದ್ದರೆಂತಲ್ಲ; ಆದರೆ ಆ ಉಪದೇಶಿಕರು ದೋಷಿಗಳಾದ ಅಸಹಾಯ ತರುಣರ ಪ್ರಾಣ ವನ್ನು ತೆಗೆದುಕೊಳುವದರಲ್ಲಿಯೂ ಕೂಡ ಯಾವ ದೋಷವನ್ನೂ ಎಣಿ ಸುತ್ತಿರಲಿಲ್ಲ. ಕ್ರೈಸ್ತರೆಂದು ಹೇಳಿಸಿಕೊಳ್ಳುವ ಆ ಜನರ ಇಂಥ ಕೃತಿ ಗಳನ್ನು ಕಣ್ಣೆತ್ತಿನೋಡಿದೆನು.

---

# ೧೬. ಸತ್ಯಾಸತ್ಯಗಳ ತಳಕು.

ನಾನು ಸಂದೇಹಪಟ್ಟುಕೊಳ್ಳುವುದನ್ನು ಬಿಟ್ಟುಕೊಟ್ಟೆನು. ಆದರೆ ನನಗೆ ಒಂದು ಮಾತಿನ ಬಗ್ಗೆ ಸಂಪೂರ್ಣ ವಿಶ್ವಾಸವುಂಟಾಯಿತು. ಅದೇನೆಂದರೆ— ನಾನು ಸ್ವೀಕರಿಸಿದ ಧರ್ಮದಲ್ಲಿ ಪೂರ್ಣಸತ್ಯತೆಯಿಲ್ಲ. ಮೊದಲೇನೋ ಈ ಧರ್ಮವೇ ಪೂರಾ ಸುಳ್ಳೆಂದು ಸ್ಪಷ್ಟವಾಗಿ ಅನ್ನುತ್ತಿದ್ದೆನು. ಆದರೆ ಈಗ ಹಾಗನ್ನಲಿಕ್ಕೆ ಆಗುವಂತಿಲ್ಲ. ಸಮಸ್ತ ಜನತೆಯಲ್ಲಿಯೂ ನಿಶ್ಚಿತವಾದ ಸತ್ಯಜ್ಞಾನವಿತ್ತು. ಏಕೆಂದರೆ ಅವರು ಅದರ ಹೊರತು ಬದುಕಿರಲೇ ಅರಿರು. ನಾನು ಆ ಸತ್ಯವನ್ನು ಅನುಭವಿಸಿದ್ದೆ. ಮತ್ತು ಅದರಿಂದಲೇ ಬದುಕಿಕೊಂಡಿದ್ದೆ. ಆದರೆ ಅದರೊಡನೆಯೇ ಸತ್ಯದಲ್ಲಿ ಸುಳ್ಳು ಬೆರೆತುಕೊಂಡಿರಬಲ್ಲದೆಂದು ಬಹುಕಾಲ ಸಂಶಯವುಂಟಾಗಿರಲಿಲ್ಲ. ಮೊದಲು ನಾನು ತಾತ್ಸಾರ ಮಾಡುತ್ತಿದ್ದ ಸಂಗತಿಗಳು ಈಗ ಇನ್ನಿಷ್ಟು ನಿಚ್ಚಳವಾಗಿ ಒಡೆದು ಕಾಣಿಸಹತ್ತಿದವು. ಕಲೆಬೇಕೆಯು ಒಕ್ಕಲಿಗರಲ್ಲಿ ಧರ್ಮೋಪದೇಶಕರಿಗಿಂತ ಕಡಿಮೆ ಯಾಗಿದ್ದುದೇನೋ ನಿಜ. ಆದರೆ ಜನತೆಯ ಶ್ರದ್ಧೆಯಲ್ಲಿಯೂ, ಸತ್ಯದೊಡನೆ ಅಬದ್ಧವೂ ಮಿಶ್ರವಾಗಿಯೇ ಇರುತ್ತದೆ.

"ಸತ್ಯವೂ ಸುಳ್ಳೂ ಎಲ್ಲಿಂದ ಬಂದವು?" ಅವೆರಡೂ ಪವಿತ್ರ ಪುರಾಣಗಳಿಂದಲೇ ಬಂದಿರುವವು. ಯಾಕೆಂದರೆ ಧಾರ್ಮಿಕ ಗ್ರಂಥಗಳು ಮತ್ತು ಪೌರಾಣಿಕ ಕಥೆಗಳಲ್ಲಿ ಸತ್ಯಾಸತ್ಯಗಳೆರಡೂ ಇವೆ. ಆದ್ದರಿಂದ ಧರ್ಮಸಂಘವೇ ನಮಗೆ ಅವೆರಡನ್ನೂ ಕೊಟ್ಟಿತು.

ನನಗೆ ಅವು ರುಚಿಸಲಿ ರುಚಿಸದಿರಲಿ, ಉಪಾಯವಿಲ್ಲದೆ ನಾನು ಧಾರ್ಮಿಕ ಗ್ರಂಥಗಳನ್ನು ಹಾಗು ಪೌರಾಣಿಕ ಕಥೆಗಳನ್ನು ಪರಿಶೀಲಿಸಿ ಅಭ್ಯಾಸ ಮಾಡಬೇಕಾಯ್ತು.

ನಾನು ಏತಕ್ಕಾಗಿ ತಪ್ಪಿಸಿಕೊಳ್ಳುತ್ತಿದ್ದೇನೋ ಅದೇ ಮುಂದೆ ಬಂತು. ಒಂದಾನೊಂದು ಕಾಲಕ್ಕೆ ನಾನು ಶಾಸ್ತ್ರವಿಷಯಗಳೆಂದರೆ, ನಿರರ್ಥಕವೆಂದೂ ನಿಸ್ಸಾರವೆಂದೂ ತಿಳಕೊಂಡು ಅವುಗಳ ಗೊಡವೆಯನ್ನೇ ಬಿಟ್ಟು ಕೊಟ್ಟಿದ್ದೆನು. ಆದರೆ ಈಗ ಅವುಗಳನ್ನು ಪರೀಕ್ಷಿಸುತ್ತ ಕೂಡುವ ಪ್ರಸಂಗವು ಬಂತು. ಧಾರ್ಮಿಕ ಸಾಹಿತ್ಯವು ಧಾರ್ಮಿಕ ತತ್ವಗಳಿಗೆ ಆಧಾರವಾಗಿದೆ. ಜೀವನದ ಅರ್ಥವನ್ನು ಹೇಳಿಕೊಡುವ ಜ್ಞಾನವು ಅವರಲ್ಲಿದೆ. ನಿಜವಾಗಿ ಅದು ನನ್ನ ಹಳೇ ಬಿರುಸು ಬುದ್ಧಿಗೆ ಎಷ್ಟೇ ಕಗ್ಗವಾಗಿ ತೋರಿದರೂ ಅದು ಮೋಕ್ಷಕ್ಕೆ ಮಹಾದ್ವಾರವಾಗಿದೆ. ಅದನ್ನರಿತುಕೊಳ್ಳುವುದಕ್ಕೆ ಅದನ್ನು ಚೆನ್ನಾಗಿ ಪರೀಕ್ಷಿಸಲು ಬೇಕು. ಆದರೆ ಭೌತಿಕ ವಿಜ್ಞಾನದಂತೆ ಅದನ್ನು ಅರಸಲಾಗದು. ಯಾಕೆಂದರೆ, ಶ್ರದ್ಧೆಯ ವೈಶಿಷ್ಟ್ಯವೇ ಬೇರೆ ಬಗೆಯದಾಗಿರುತ್ತದೆಂಬುದನ್ನು ನಾನು ಬಲ್ಲೆನು. ನಾನು ಪ್ರತಿಯೊಂದರ ಅರ್ಥವನ್ನೂ ತಿಳಿದುಕೊಳ್ಳಲಿಳಿಸುವದಿಲ್ಲ. ಯಾಕೆಂದರೆ, ಪ್ರತಿಯೊಂದು ಸಂಗತಿಯ ಬಗೆಗೆ ತಿಳುವಳಿಕೆಯನ್ನು ಮಾಡಿಕೊಳ್ಳಬೇಕೆಂಬುದು ಬಹಳ ಬಿಗಿಯಾಗಿದೆ. ಪ್ರತಿಯೊಂದು ವಸ್ತುವಿನ ಉತ್ಪತ್ತಿ ರಹಸ್ಯವು ಎಷ್ಟು ಬಿಗಿಯಾಗಿದೆಯೋ ಅಷ್ಟೇ ಇದೂ ಬಿಗಿಯಾಗಿದೆ. ಆದರೆ ನಾನೀ ಬಗೆಗೆ ಪ್ರಯತ್ನಿಸುತ್ತಿರುವ ಮಾರ್ಗವು ಭಿನ್ನವಾಗಿದೆ. ಅದೇನಂದರೇ— **ಯಾವುದನ್ನು ತಿಳಿದುಕೊಳ್ಳಲಿಕ್ಕೇ ಶಕ್ಯವಿಲ್ಲವೋ ಆದರ ಬಗೆಗೆ " ಇದು ತಿಳುವಳಿಕೆಗೆ ಬರುವಂತಹದಲ್ಲ. " ಎಂಬ ಜ್ಞಾನಕ್ಕೆ ನಾನು ಬಂದು ಮುಟ್ಟಿದರೆ ಸಾಕೆಂದು ನಾನು ಭಾವಿಸಿದ್ದೇನೆ.** ಹೀಗೆಂದ ಮಾತ್ರಕ್ಕೆ ನನ್ನ ಬುದ್ಧಿಯ ಪ್ರಶ್ನಗಳೇ ಸರಿಯಾಗಿಲ್ಲವೆಂತಲ್ಲ. (ಅವು ಸರಿಯಾಗಿಯೇ ಇವೆ. ಅವುಗಳನ್ನು ಬಿಟ್ಟರೆ ನಾನು ಏನೂ ತಿಳಿದು ಕೊಳ್ಳಲಿಕ್ಕ ಶಕ್ಯವಿಲ್ಲ ) ಆದರೆ ನಾನು ನನ್ನ ಬುದ್ಧಿ ಶಕ್ತಿಯ ಸೀಮಾ ಬದ್ಧತೆಯನ್ನು ಬಲ್ಲೆನಾದ್ದರಿಂದ ಹೀಗೆ ಅನ್ನುತ್ತೇನೆ.

ಧರ್ಮ ಶಾಸ್ತ್ರಗಳ ಬೋಧನೆಯಲ್ಲಿ ಸತ್ಯವು ಇದ್ದದ್ದು ನಿರ್ವಿವಾದವೆಂದು ನನಗೆ ತೋರಿತು. ಆದರೆ ಅದರಂತೆ ಅವರಲ್ಲಿ ಅಬದ್ಧವಿದ್ದದ್ದೂ ಅಷ್ಟೇ ನಿರ್ವಿವಾದವಾಗಿದೆ. ಯಾವುದು ಸತ್ಯ, ಯಾವುದು ಅಬದ್ಧ

ಎಂಬುದನ್ನು ನಾನು ಹುಡುಕಿ ತೆಗೆಯಲಿಕ್ಕೆ ಬೇಕು. ಅವೆರಡರ ತೊಡ ಕನ್ನು ಬಿಡಿಸಿ ಅವುಗಳನ್ನು ಪ್ರಥಕ್ಕರಿಸಲುಬೇಕು. ಈ ಬಗೆಗೆ ನಾನು ಪರಿಶ್ರಮವನ್ನು ನಡಿಸಿದ್ದೇನೆ. ಧರ್ಮ ಶಾಸ್ತ್ರಗಳ ಬೋಧನೆಯಲ್ಲಿ ಯಾವ ಸತ್ಯಾಸತ್ಯಗಳನ್ನು ನಾನು ಕಂಡು ಹಿಡಿದಿರುವೆನೆಂಬವನ್ನು ಬೇರೊಂದು ಪುಸ್ತಕದಲ್ಲಿ ವಿವರಿಸಬಲ್ಲೆನು.

೧೮೭೯.

ಹಿಂದಿನವನ್ನು ನಾನು ಮೂರು ವರುಷಗಳ ಹಿಂದೆಯೇ ಬರೆದಿರುವೆನು. ಅದು ಈಗ ಪ್ರಕಟವಾಗಲಿದೆ.

ಅದನ್ನು ತಿರುಗಿ ತಿದ್ದಿ, ವಿಚಾರ ಮತ್ತು ಭಾವನೆಗಳ ಮಾರ್ಗದ ಮೇಲೆ ತಂದು ನಿಲ್ಲಿಸುವ ಕೆಲಸವನ್ನು ನಡಿಸಿರಲು (ಅದರ ಮೂಲಕವೇ ನಾನು ಬಾಳಿ ಬದುಕುತ್ತಿರುವಾಗ) ಕೆಲ ದಿನಗಳ ಹಿಂದೆ ನಾನೊಂದು ಕನಸನ್ನು ಕಂಡೆನು. ಆ ಸ್ವಪ್ನವು ನಾನು ಅನುಭವಿಸಿದುದರ ಹಾಗೂ ಬರೆದುದರದೇ ಸಾರವಾಗಿದೆ. ನನ್ನನ್ನು ತಿಳಿದಿರುವವರಿಗೆ ಈ ಸ್ವಪ್ನವು ನನ್ನ ಮುಂಚಿನ ದೀರ್ಘವಾದ ಬರಹಕ್ಕೆ ಹೊಸ ಕಳೆಯನ್ನು ಕೊಡುತ್ತದೆ. ಅಲ್ಲದೆ ಅದನ್ನು ನಿಚ್ಚಳಗೊಳಿಸುತ್ತದೆ. ಆ ಕನಸು ಹೀಗಿದ್ದಿತು:—

ನಾನೊಂದು ಹಾಸಿಗೆಯ ಮೇಲೆ ಮಲಗಿದುದಾಗಿ ಕಂಡೆನು. ನನಗಾಗ ಸುಖಕರವೂ ಅನಿಸುತ್ತಿರಲಿಲ್ಲ; ಅಸುಖಕರವೂ ಅನಿಸುತ್ತಿರಲಿಲ್ಲ. ನಾನು ಅಂಗಾತವಾಗಿ ಮಲಗಿದ್ದೆನು. ಆದರೆ ಅದು ವರೆಗೆ ನನ್ನ ತಲೆಯಲ್ಲಿ ಬಾರದ ಪ್ರಶ್ನವೊಂದು ಆಗ ನನ್ನಲ್ಲಿ ಬಂದು, ನಾನು ಏತರ ಮೇಲೆ ಹೇಗೆ ಮಲಗಿಕೊಂಡಿರುವೆನೆಂಬುದನ್ನು ಕುರಿತು ಆಲೋಚಿಸತೊಡಗಿದೆನು. ನಿರೀಕ್ಷಿಸಿ ನೋಡಿದ ಮೇಲೆ ನನ್ನ ಹಾಸಿಗೆಯ ಎರಡೂ ದಂಡೆಗುಂಟ ಸಾಲಾಗಿ ಲಾಡಿಯ ಪಟ್ಟಿಗಳನ್ನು ಅಂಟಿಸಿರುವುದಾಗಿ

---

* ಈ ಪುಸ್ತಕದ ರಸಿಯನ್ ಭಾಷೆಯ ಪ್ರಥಮಾವೃತ್ತಿಯು ೧೮೮೨ ರಲ್ಲಿ ಪ್ರಕಟವಾಯಿತು.

ಕಂಡು ಬಂತು. ಇಂಥ ಒಂದು ಪಟ್ಟಿಯ ಮೇಲೆ ನನ್ನ ಅಡಿಗಳೂ ಇನ್ನೊಂದರ ಮೇಲೆ ನನ್ನ ಪಿಂಡರಿ (ಮೀನಗಂಡ) ಗಳೂ ಇಡಲ್ಪಟ್ಟಿದ್ದವು. ನನ್ನ ಕಾಲುಗಳಿಗೆ ಒಂದಿಷ್ಟು ಅಸುಖವೆನಿಸಹತ್ತಿತು. ಆಗ ನಾನು ನೋಡಲು ಆ ಪಟ್ಟಿಗಳು ಸರಿಸಾಡಲಿಕ್ಕೆ ಬರುವಂತೆ ಇವೆಯೆಂದು ತೋರಿತು. ಆಗ ಕಟ್ಟಕಡೆಯ ಪಟ್ಟಿಯನ್ನು ನನ್ನ ಅಡಿಗಳ ಕೆಳಗಿಂದ ಒಂದಿಷ್ಟು ಮುಂದಕ್ಕೆ ನೂಕಿದರೆ ನನ್ನ ಕಾಲಿಗೆ ಸುಖವಾಗಬಹುದೆಂದು ಹಾಗೆ ಮಾಡಿದೆನು. ಆದರೆ ಅದನ್ನು ಬಹಳ ದೂರ ಮಾಡಿದೆನು. ತಿರುಗಿ ಅಡಿಯಿಂದ ಅದನ್ನು ನಿಲುಕಿಸಬಲ್ಲೆನೆಂದು ಬಗೆದಿದ್ದೆನು. ಆದರೆ ಆ ಆಗಳಾಟದಿಂದ ಪಿಂಡರಿಯ ಕೆಳಗಿನ ಪಟ್ಟಿಯೂ ಕೂಡ ಜಾರಿ ಹೋಯಿತು. ಅದರಿಂದ ನನ್ನ ಕಾಲುಗಳು ಅಂತರದಲ್ಲಿ ಜೋತಾಡ ಹತ್ತಿದವು. ಆಗ ನಾನು ಸರಿಪಡಿಸಿಕೊಳ್ಳಬೇಕೆಂದು ನನ್ನ ಮೈಯನ್ನು ತೂಗಾಡಿಸಿದೆನು. ಅದರಿಂದ ಕೂಡಲೆ ಎಲ್ಲವೂ ಸರಿಹೋಗಬಹುದೆಂದು ಬಗೆದಿದ್ದೆನು. ಆದರೆ ಅದಕ್ಕೆ ಬದಲು ನನ್ನ ಕೆಳಗಿನ ಇನ್ನೊಂದು ಪಟ್ಟಿಯು ಜರಿದು ಹೋಗಿ ಬಹಳೇ ವಿಪರೀತಕ್ಕೆ ಬಂದು ಬಿಟ್ಟಿತು. ನನ್ನ ಮೈಯ ಕೆಳಗಡೆಯ ಭಾಗವೆಲ್ಲ ಜರಿದು ಜೋತಾಡಹತ್ತಿತು, ಆದರೆ ಕಾಲುಗಳು ನೆಲಕ್ಕೆ ಹತ್ತಿರಲಿಲ್ಲ. ನನ್ನ ಬೆನ್ನಿನಿಂದ ಮಾತ್ರ ನಾನು ಅವನ್ನು ಹಿಡಿದುಕೊಂಡಿದ್ದರಿಂದ ಅಸುಖವೆನಿಸ ಹತ್ತಿ-ತೆಂಬುದಿಷ್ಟೇ ಅಲ್ಲ; ಆದರೆ ನನಗೆ ಭಯವೆನಿಸಹತ್ತಿತು. ಅದುವರೆಗೂ ಮನಸ್ಸಿಗೆ ಹೊಳೆಯದ ಯಾವಾವ ಮಾತುಗಳನ್ನೋ ಕುರಿತು ಆಗ ಆಲೋಚಿಸ ತೊಡಗಿದನು. ನಾನೆಲ್ಲಿ ಇದ್ದೇನೆ? ಯಾವಲ್ಲಿ ಜೋತಾಡುತ್ತಿದ್ದೇನೆ? ಸುತ್ತ ಮುತ್ತಲೆಲ್ಲ ನೋಡ ತೊಡಗಿದನು. ಆದರಲ್ಲಿಯೂ ಎಲ್ಲಕ್ಕೂ ಮೊದಲಿಗೆ— ನಾನು ಕೂಡಲೆ ಬೀಳಬಹುದಾಗಿರುವ ನಿಟ್ಟಿಗೆ ಕಣ್ಣಿಟ್ಟೆನು. ಕೆಳಕ್ಕೆ ನೋಡಿದೆನು. ಆದರೆ ನನ್ನ ಕಣ್ಣುಗಳನ್ನು ನಂಬುವದು ನನಗೆ ಸಾಧ್ಯವಾಗಲಿಲ್ಲ. ಯಾಕೆಂದರೆ ನಾನಾಗ ಪರಮೊನ್ನತವಾದ ಪರ್ವತ ಶಿಖರಕ್ಕಿಂತಲೂ ಹೆಚ್ಚು ಎತ್ತರದಮೇಲಿದ್ದೆನು. ಅಷ್ಟು ಎತ್ತರವನ್ನು ನಾನು ಎಂದೆಂದೂ ಕಲ್ಪಿಸಿಲಾರೆನು.

ಕೆಳಗೆ ನೋಡಿದರೆ ಮಹಾ ಭಯಂಕರವಾದ ಅತಳವು. ನನ್ನ ಹೃದಯವು ಅದನ್ನು ನೋಡಿ ತಲ್ಲಣಿಸಿತು. ಅತ್ತ ಕಡೆಗೆ ಕಣ್ಣಿಟ್ಟು ನೋಡಿದರೆ ಒಡನೆಯೇ ನಾನು ಕೊನೆಯ ಪಟ್ಟಿಯ ಮೇಲಿಂದ ಜರಿದು ಅಂತವಿಲ್ಲದ ಆ ಮಹಾ ಅತಳದಲ್ಲಿ ಬಿದ್ದು ಸತ್ತು ಹೋಗುತ್ತೇನೆಂದೆ ನಿಸಿತು. ಆದುದರಿಂದ ನಾನು ಅತ್ತ ಕಡೆಗೆ ನೋಡಲಿಲ್ಲ. ಆದರೆ ಹಾಗೆ ಅತ್ತ ಕಡೆಗೆ ನೋಡದಿರುವುದು ಇನ್ನಿಷ್ಟು ಕೆಡಕಿಗೇ ಕಾರಣವಾಗುವ ದೆಂದು ನನಗೆ ತೋರಿತು. ಯಾಕೆಂದರೆ ನಾನು ನೇರವಾಗಿ ಆ ಕೊನೆಯ ಪಟ್ಟಿಯಿಂದ ಜಾರಿ ಬಿದ್ದುಹೋಗಲಿರುವೆನೆಂದು ನನಗೆ ಅನಿಸುತ್ತಿದ್ದಿತು. ಅಂತು ಹೆದರಿಕೆಯಿಂದ ನನ್ನ ಕೊನೆಯ ಆಧಾರವನ್ನು ನಾನು ತಪ್ಪಿಸಿ ಕೊಳ್ಳುತ್ತ ಆ ಪಟ್ಟಿಯಿಂದ ನನ್ನ ಬೆನ್ನು ಜರಿಜರಿದು ಕೆಳಕೆಳಗೆ ಬರ ಹತ್ತಿತು. ಮರುಕ್ಷಣದಲ್ಲಿಯೇ ನನ್ನ ಮುಗಿತಾಯವಾಗತಕ್ಕದ್ದು. ಆಗ ನನಗೆ ಅನಿಸಹತ್ತಿದ್ದೇನೆಂದರೆ, ಇದು ವಾಸ್ತವವಾಗಿರಲಾರದು. ಇದೊಂದು ಕನಸು. ಎಚ್ಚರಾಗುವೆ. ಪ್ರಯತ್ನಿಸಿದೆ, ಆದರೆ ಅದು ಶಕ್ಯವಾಗಲಿಲ್ಲ. ಏನು ಮಾಡಲಿ? ಏನು ಮಾಡಲಿ? ಎಂದು ಅಂದು ಕೊಳ್ಳುತ್ತ ಮೇಲ್ಮಗ್ಗಲಿಗೆ ನೋಡಿದೆನು. ಮೇಲೆ ಆ ಕಡೆಗೂ ಒಂದು ಅಂತವಿಲ್ಲದ ಪಾರವಿಲ್ಲದ ಸ್ಥಲವಿದ್ದಿತು. ಮೇಲ್ಗಡೆಗಿದ್ದ ಆ ಆಕಾಶದ ಅಗಾಧವನ್ನು ನೋಡುತ್ತ ಕೆಳಗಡೆಗಿರುವ ಈ ಅತಳದ ಅಗಾಧವನ್ನು ಮರೆಯಲಿಕ್ಕೆ ಯತ್ನಿಸಿದೆನು. ನಿಜವಾಗಿಯೂ ಅದರ ನೆನಪು ಹಾರಿತು. **ಕೆಳಗಡೆಗಿರುವ ಅಪಾರವು ನನ್ನನ್ನು ಚದರಿಸಿ ಹೆದರಿಸುತ್ತದೆ; ಮೇಲ್ಗಡೆ ಗಿರುವ ಅಗಾಧವು ನನ್ನನ್ನು ಆಕರ್ಷಿಸಿ ಬಲಪಡಿಸುತ್ತದೆ.** ಆ ಅತಳದ ಮೇಲೆಯೂ ಕೂಡ ನಾನು ಕೊನೆಯ ಪಟ್ಟಿಗಳ ಆಧಾರದ ಮೇಲೆ ರಕ್ಷಿಸಲ್ಪಟ್ಟಿದ್ದೆನು. ನಾನು ಜೋತಾಡುತ್ತಿದ್ದೇನೆಂಬುದು ನನಗೆ ಗೊತ್ತಿದ್ದಿ ತಾದರೂ ಮೇಲ್ಗಡೆಗೆ ನೋಡಿದೊಡನೆ ಭಯವೆಲ್ಲ ಓಡಿಹೋಗುತ್ತಿದೆ. ಹೀಗೆ ಸ್ವಪ್ನದಲ್ಲಿ ನಡೆದಿರುವಾಗಲೇ ಒಂದು ವಾಣಿಯು ಕೇಳಿಸಿತು. **“ಇದನ್ನು ಲಕ್ಷ್ಯಗೊಟ್ಟು ನೋಡು, ಅದೇ ಇದು.”** ನಾನು ಮೇಲ್ಗಡೆ ಗಿರುವ ಅನಂತವನ್ನು ನೋಡುತ್ತಿದ್ದ ಹಾಗೆ ನನ್ನಲ್ಲಿ ಶಾಂತಿಯು ಹೆಚ್ಚು

ಹೆಚ್ಚಾಗಿ ಇಳಿಯುತ್ತಿದೆಯೆಂದು ನನಗೆ ಅನಿಸತೊಡಗಿತು. ನಡೆದುದೆಲ್ಲಾ ನನಗೆ ಸ್ಮರಣದಲ್ಲಿದ್ದಿತು. ನನ್ನ ಕಾಲುಗಳನ್ನು ಅಗಳಾಡಿಸಿದ್ದು, ನಾನು ಜೋತಾಡಿದ್ದು, ಭಯಪಟ್ಟದ್ದು, ಮತ್ತು ಮೇಲ್ಗಡೆಗೆ ನೋಡಿದೊಡನೆ ಆ ಭಯದ ಕೈಯೊಳಗಿಂದ ನಾನು ಪಾರಾದದ್ದು ಇವೆಲ್ಲಾ ಹೇಗೆ ಹೇಗೆ ನಡೆದವೆಂಬುದೆಲ್ಲಾ ನನಗೆ ನೆನಪಿನಲ್ಲಿದ್ದಿತು. ಆಗ ನನ್ನೊಳಗೆ ನಾನು ಅಂದುಕೊಂಡದ್ದೇನಂದರೆ— ಒಳ್ಳೆಯದು, ಈಗಲೂ ನಾನು ಅದೇ ರೀತಿ ಯಿಂದ ತೂಗಾಡುತ್ತಿರುವದಿಲ್ಲವೆ? ಆದರೂ ನಾನು ಬೀಳದೆ ಇರುವೆ ನಲ್ಲ. ಯಾವದರ ಆಧಾರದ ಮೇಲೆ ನಾನು ತಟ್ಟನಿಂತಿರುವೆನು? ನನ್ನ ನೈಯ್ಯು ಕೆಳಮುಗ್ಗಲಿಗೆ ನೋಡಿದೆನು. ಅಲ್ಲಿ ನಟ್ಟನಡುವೆ ಒಂದು ಪಟ್ಟಿಯು ಆಧಾರವಾಗಿ ಉಳಿದುಕೊಂಡಿದೆ. ನಾನು ಮೇಲ್ಗಡೆಗೆ ದೃಷ್ಟಿ ಯನ್ನಿಟ್ಟೊಡನೆಯೆ ಆ ಪಟ್ಟಿಯ ಮೇಲೆ ನನ್ನ ದೇಹವು ಬೀಳದಂತೆ, ಸಮತೂಕದಿಂದ ನಿಂತಿರುವದು. ಅದೊಂದೇ ನನಗೆ ಮುಂಚೆಯೂ ಆಧಾರವಾಗಿದ್ದಿತು. ಕನಸಿನಲ್ಲಿ ಹೀಗೆ ನಡೆದಿರುವಾಗ ನಾನು ಇದು ವರೆಗೆ ಅಂಟಿಕೊಂಡು ಉಳಿದುದು ಯಾವುದರ ಮೇಲೆಯೋ ಅದರ ರಚನೆ ಹೇಗಿದೆಯೆಂಬುದನ್ನು ಕುರಿತು ಆಲೋಚಿಸತೊಡಗಿದೆನು. ಕನಸಿನಲ್ಲಿ ಅತ್ಯಂತ ಸ್ವಾಭಾವಿಕವಾದುದಾಗಿಯೂ, ಬುದ್ಧಿವಂತಿಕೆಯುಳ್ಳದ್ದಾಗಿಯೂ ತೋರುತ್ತಿದ್ದ ಆ ರಚನೆಯನ್ನು ಎಚ್ಚರಿಕೆಯಿಂದಿರುವಾಗ ನೆನಸಿದರೆ ಎಳ್ಳಷ್ಟೂ ಅದರಲ್ಲಿ ಅರ್ಥವು ಕಾಣಲಾರದು. ನನ್ನ ತಲೆಯ ಕೆಳಗೆ ಒಂದು ಕಂಬವಿದ್ದು ಅದರಿಂದ ಒಂದು ಕಣ್ಣಿಯು ಜೋತಾಡುತ್ತಿದ್ದಿತು. ಅದರ ಮೇಲೆ ನಡುಬೆನ್ನನ್ನು ಇಟ್ಟು ಮೇಲ್ಗಡೆಗೆ ದೃಷ್ಟಿಯನ್ನಿಟ್ಟರೆ ಬಿದ್ದು ಹೋಗುವ ಪ್ರಶ್ನವೇ ಇರಲಿಲ್ಲ. ಇದೆಲ್ಲವೂ ನನಗೆ ನಿಚ್ಚಳವಾಗಿ ಬಿಟ್ಟ ದ್ದರಿಂದ ಸಂತುಷ್ಟನಾದೆನು. ಇಷ್ಟರಲ್ಲಿ ಯಾರೋ ಒಬ್ಬರು ಹೇಳಿದಂತೆ ಅನಿಸಿತು: “ ನೋಡು ನೆನಪಿನಲ್ಲಿಡು ”

ಬಳಿಕ ಎಚ್ಚತ್ತೆನು.

೧೮೮೨.



# ೧೪. ಆಚಾರಸಂಕಟ.

ನಾನು ಬದುಕಿ ಬಾಳುವುದಕ್ಕೆ ಶ್ರದ್ಧೆಯ ಆವಶ್ಯಕತೆಯು ಬಹಳ ವಾಗಿ ಇತ್ತು. ಅಂತೇ ನಾನು ಬುದ್ಧಿಪೂರ್ವಕವಾಗಿ ವಿರೋಧಾತ್ಮಕ ಸಂಗತಿಗಳ ಕಡೆಯಿಂದ ದೃಷ್ಟಿಯನ್ನು ತಿರುಗಿಸಿಕೊಂಡೆನು. ಆದರೆ ಪ್ರಾರ್ಥ ನಾಮಂದಿರದಲ್ಲಿ ಓದಲಾಗುತ್ತಿದ್ದ ಕೆಲವು ವಚನಗಳು ನನ್ನ ಬುದ್ಧಿಗೆ ಎಷ್ಟೂ ಹಿಡಿಸುತ್ತಿರಲಿಲ್ಲ. ಪ್ರಾರ್ಥನೆಯ ಕೆಲವು ಮಾತುಗಳಿಗೆ ನಾನು ನನ್ನ ತಿಳುವಳಿಕೆಯ ಸಲುವಾಗಿ ಬೇರೊಂದು ಅರ್ಥವನ್ನೇ ಹಚ್ಚಿಕೊಳ್ಳು ತ್ತಿದ್ದೆ. ಚಕ್ರವರ್ತಿ ಹಾಗೂ ಆತನ ವಂಶಕ್ಕೆ ಸಂಬಂಧಪಟ್ಟವರ ಸಲು ವಾಗಿ ಬಾರಿಬಾರಿಗೆ ಪ್ರಾರ್ಥನೆ ಮಾಡುವುದಕ್ಕೆ ನಾನು ತಿಳಕೊಂಡ ಕಾರಣವೇನಂದರೆ— ಚಕ್ರವರ್ತಿಯೂ, ಆತನ ವಂಶದವರೂ ಸಾಮಾನ್ಯ ಜನರಿಗಿಂತ ಹೆಚ್ಚು ಪಾಪಿಗಳಾಗಿರುತ್ತಾರೆ. ಅಂತೇ ಅವರ ಸಲುವಾಗಿ ಪ್ರಾರ್ಥನೆ ಮಾಡುವುದರ ಅಗತ್ಯವಿರುತ್ತದೆ. ಆದರೆ ರೊಟ್ಟಿ ಮತ್ತು ಶರಬತ್ತುಗಳ ಸಿದ್ಧತೆ, ಹಾಗೂ ಕುಮಾರಿಯಾದ ಮೇರಿಯ ಪೂಜೆ ಇವುಗಳ ಬಗ್ಗೆ ನನಗೇನೇನೂ ತಿಳಿಯುತ್ತಿರಲಿಲ್ಲವಾದರೂ ನಾನು ಎಣಿಸಿದ್ದೇ ನಂದರೆ— ಇವುಗಳಿಗೆ ಅಪಾರ್ಥ ಹಚ್ಚುವುದೆಂದರೆ ಈಶ್ವರನ ಅಸ್ತಿತ್ವಕ್ಕೆ ವಿರೋಧಿಸಿದಂತೆಯೇ ಸರಿ.

ಪ್ರಾರ್ಥನಾ ಮಂದಿರದ ವಿಶೇಷ ಹಬ್ಬದ ವಿರಾಮ ದಿನಗಳ **(Holidays)** ವಿಷಯದಲ್ಲಿಯೂ ನನ್ನ ಅವಸ್ಥೆಯು ಹೀಗೆಯೇ ಇತ್ತು. ಏಳನೇ ದಿನದ ಬಿಡುವೆಂದರೆ ಒಂದು ಇಡೀ ದಿನ ಈಶ್ವರಾರಾಧನೆಯಲ್ಲಿ ಕಳೆಯುವುದೆಂದು ನಾನು ತಿಳಿಯುತ್ತಿದ್ದೆ. ಆದರೆ ರವಿವಾರದ ಬಿಡುವು, ಸತ್ಯಕ್ಕಾಗಿ ಆಹುತಿಯಾದವರ ದಿನವೆಂದೂ, ಅದು ಚಿತ್ರಗುಪ್ತನ ಟಿಪ್ಪಣೆ ಯಲ್ಲಿದೆಯೆಂದೂ ಕೇಳಿದೆ. ಆದರೆ ಈ ಮಾತು ನನ್ನ ಬುದ್ಧಿಗೆ ಎಷ್ಟೂ ಹಿಡಿಸಲಿಲ್ಲ. ಇವಲ್ಲದೆ ' ಕ್ರಿಸ್‌ಮಸ್ ' (ಮಹಾದಿನ) ಹಬ್ಬದ ಹನ್ನೆರಡು ವಿರಾಮ ದಿನಗಳೆಂದರೆ ಪವಾಡವೆಂದು ಹೇಳಲಾಗಿದೆ. ನಾನು ಅವುಗಳ

ಕಡೆಗೆ ಅಷ್ಟು ಹೆಚ್ಚು ಲಕ್ಷ್ಯಕೊಡಲಿಲ್ಲ. ಈ ಎಲ್ಲ ವಿರಾಮ ದಿನಗಳಲ್ಲಿ ನನಗೆ ಅತ್ಯಂತ ಕಡಿಮೆ ಮಹತ್ವದ್ದಾದ ಒಂದು ದಿನವು ಒಳ್ಳೇ ಮಹತ್ತರವಾಗಿ ಎಣಿಸಲ್ಪಡುತ್ತಿತ್ತು. ಅಂತೂ ನಾನು ನನ್ನ ವಿಚಾರಕ್ಕನುಸರಿಸಿ ಅದಕ್ಕೊಂದು ಅರ್ಥವನ್ನು ಕಲ್ಪಿಸುತ್ತಿದ್ದೆ. ಇಲ್ಲವೇ ಅವುಗಳನ್ನು ಹೊರಳಿ ನೋಡದಂತೆ ಕಣ್ಣು ಮುಚ್ಚಿಕೊಳ್ಳುತ್ತಿದ್ದೆ.

ಇಂಥ ತೀರ ಸಾಮಾನ್ಯವಾದ ಮಾತಿಗೂ ಜನರು ವಿಶೇಷ ಮಹತ್ವ ಕೊಡುತ್ತಿರುವುದನ್ನು ಕಂಡಾಗ ನನ್ನ ಅಶಾಂತಿಯು ಇಮ್ಮಡಿಸುತ್ತಿತು. "ಹಾಗಾದರೆ ನಾನೇನು ಮಾಡಲಿ? ನಾನು ಸುಳ್ಳಿನಲ್ಲಿ ಒಂದುಗೂಡಿ ಹೋಗಲಿಯಾ? ಇಲ್ಲವೆ ಈ ಮಾತನ್ನು ಒಡಂಬಡುವುದನ್ನೆ ಬಿಟ್ಟು ಕೊಡಲಿಯಾ?" ಎಂಬ ತಳಮಳದಲ್ಲಿದ್ದೆ ನಾನು.

ಬಹಳ ದಿನಗಳು ಕಳೆದಮೇಲೆ ಒಂದು ದಿನ ಪ್ರಾರ್ಥನಾಮಂದಿರದಲ್ಲಿ ಪ್ರಭು ಭೋಜನದ ವಿಧಾನವನ್ನು ಕುರಿತು ಹೋದಾಗ ಅನುಭವಿಸಿದ ಕಷ್ಟವನ್ನು ನಾನು ಎಂದೆಂದಿಗೂ ಮರೆಯಲಾರೆ. ಎಷ್ಟೇ ಕೃತ್ರಿಮವಾಗಿದ್ದರೂ ಉಪದೇಶ, ಪ್ರಾರ್ಥನೆ, ಪಾಪಗಳನ್ನು ಒಪ್ಪಿಕೊಳ್ಳುವುದು ಇವೆಲ್ಲಾ ನನಗೆ ಒಳ್ಳೆಯವೆಂದು ತೋರಿದವು. ಆದ್ದರಿಂದ ಹಳ್ಳಿಗಾಡಿನ ಸಾಧಾರಣ ಹೇಡಿ ಉಪಾಧ್ಯಾಯನ ಇದಿರಿಗೆ ತಲೆಬಾಗಿದೆನು. ಆದರೆ ನಾನು ಗದ್ದುಗೆಯನ್ನು ಸಮೀಪಿಸಲು ಆ ಉಪಾಧ್ಯಾಯನು ನನಗೆ ಹೇಳಿದ್ದೇನೆಂದರೆ— "ಈಗ ನೀನು ನುಂಗುತ್ತಿರುವುದು ನಿಜವಾಗಿಯೂ ಮಾಂಸ ಮತ್ತು ರಕ್ತವೆಂದು ನಂಬಬೇಕು." ಇದನ್ನು ಕೇಳಿ ನನ್ನ ಮನಸ್ಸಿಗೆ ಈಟಿಯಿಂದ ಇರಿದಂತಾಯ್ತು. ಇದೇನು ಸಾಮಾನ್ಯವಾದ ಮಾತಲ್ಲ. ಇದರಿಂದ ತಿಳಿದುಬರುವುದೇನೆಂದರೆ— ಸುಮ್ಮನೆ ಇಲ್ಲದ್ದಕ್ಕೆ ರಕ್ತ ಮಾಂಸವೆಂದು ಅನ್ನುವವನಿಗೆ 'ಧರ್ಮ' ವು (**Faith**) ಒಂದಿಷ್ಟು ತಿಳಿದಿಲ್ಲ.

ನಾನು ಹರೆಯದ ಕಾಲಕ್ಕೆ ಒಮ್ಮೊಮ್ಮೆ ಅನ್ನುತ್ತಿದ್ದೆ— ಜೀವನದ ಸಮಸ್ತ ವಿಷಯಗಳು ಸರಳವಾಗಿವೆಯೆಂದು. ಆದರೆ ಅದು ಹಾಗಿಲ್ಲವೆಂದು

ಅನಿಸುವುದಕ್ಕೆ ಬಹಳ ಕಾಲವೇನೂ ಬೇಕಾಗಲಿಲ್ಲ. ಇರಲಿ. ನಾನು ಶ್ರದ್ಧೆಯಿಂದಲೇ ನನ್ನ ಸರ್ವನಾಶವನ್ನು ದಾಟಿದ್ದೆನಾದ್ದರಿಂದ ಅದನ್ನೀಗ ನಾನು ಅಲ್ಲಗಳೆಯುವಂತಿರಲಿಲ್ಲ. ಆದ್ದರಿಂದ ನಾನು ಅಂದು ಆ ಧರ್ಮೋಪದೇಶಕನ ಅಪ್ಪಣೆಯಂತೆ ಅದನ್ನು ತಿಂದೆನು. ಆದರೆ ಆತನ ಮಾತಿನ ಸೆಳಕು ಒಳಿತಾಗಿ ತಗುಲಿದ್ದರಿಂದ ಮತ್ತೊಮ್ಮೆ ಎಂದೂ ( ಆ ವಿಧಾನಕ್ಕೆ ) ಹೋಗಲೇ ಇಲ್ಲ.

ನಾನು ಪ್ರಾರ್ಥನಾ ಮಂದಿರದ ಆಚಾರಗಳನ್ನೆಲ್ಲ ಸಂಪೂರ್ಣವಾಗಿ ಪಾಲಿಸುತ್ತಿದ್ದೆ. ಮತ್ತು ನನ್ನ ಶ್ರದ್ಧೆಯು ತುಂಬಾ ಸರಿಯಾಗಿದೆಯೆಂದೂ ಆಗ ಎಣಿಸುತ್ತಿದ್ದೆನು.

ಒಮ್ಮೆ ಒಬ್ಬ ಅಶಿಕ್ಷಿತನಾದ ಒಕ್ಕಲಿಗ ಯಾತ್ರಿಕನು ಈಶ್ವರ, ಶ್ರದ್ಧೆ, ಜೀವನ ಹಾಗೂ ಮುಕ್ತಿ ಇವುಗಳನ್ನು ಕುರಿತು ಹೇಳುತ್ತಿದ್ದುದನ್ನು ನಾನು ಕೇಳಿದೆನು. ಅದರಿಂದ ನನಗೆ ಶ್ರದ್ಧೆಯ ಬಗೆಗೆ ತಿಳುವಳಿಕೆಯೇ ತೆರೆಯಿತು.

ನಾನು ಸಾಮಾನ್ಯ ಜನರಲ್ಲಿ ಬೆರೆತುಕೊಂಡಿದ್ದೆನು. ಅವರ ಶ್ರದ್ಧೆಯನ್ನೂ ವಿಚಾರಗಳನ್ನೂ ಅರಿತುಕೊಂಡೆನು. ನನಗನಿಸಿತು— ನಾನು ಸತ್ಯವನ್ನು ತೀರಾ ಸಮೀಪಿಸಿದ್ದೇನೆಂದು. ಅದೇ ಸಮಯಕ್ಕೆ ಮತ್ತೊಂದು ಮಾತು ಕೂಡಿಬಂತು. ನಾನು ಒಳ್ಳೇ ಮಹತ್ತ್ವದ ಕೆಲವು ಪುಸ್ತಕಗಳನ್ನು ಓದಿಕೊಂಡೆನು. ಪವಿತ್ರ ಪುರುಷರ ಚರಿತ್ರಗಳೊಳಗಿನ ಅಘಟಿತ ಘಟನೆಗಳನ್ನು ನಾನು ನಂಬದಿದ್ದರೂ ಆ ಗ್ರಂಥಗಳಿಂದ ನನಗೆ ಜೀವನದ ಅರ್ಥವು ಬಿಚ್ಚಿಹೋಯಿತು.

ಧರ್ಮಕ್ಕಾಗಿ ಪ್ರಾಣವನ್ನಿತ್ತವರ ಕಥೆಗಳಲ್ಲಿ ಉಪದೇಶಿಸಿದ— ‘ ಜೀವನವು ಮೃತ್ಯುವಿನೊಡನೆಯೇ ಸಮಾಪ್ತವಾಗುವದಿಲ್ಲ ’ ಎಂಬ

ಮಾತಿನಿಂದ ನನಗೆ ಅತ್ಯಾನಂದವಾಯ್ತು. ನಾನೋದಿದ ಇಂಥ ಇನ್ನೆಷ್ಟೋ ಪುಸ್ತಕಗಳಲ್ಲಿ ಪ್ರಾರ್ಥನಾಮಂದಿರದ ಸಿದ್ಧಾಂತಗಳನ್ನೇನೂ ತಿಳಿಯದ ಅನೇಕ ಅಶಿಕ್ಷಿತ ಭಕ್ತರ ಕಥೆಗಳಿವೆ.

ಆದರೆ ನಾನು ಇವುಗಳನ್ನು ಬಿಟ್ಟು ಸುಶಿಕ್ಷಿತ ಶ್ರದ್ಧಾಳುಗಳ ಸಂಗತಿಗೆ ಸೇರಿ ಅವರ ಕೃತಿಗಳನ್ನು ಓದುತ್ತಿದ್ದಾಗ ನನ್ನ ಮನಸ್ಸಿನಲ್ಲಿ ಸಂಶಯಗಳೂ, ಅಶಾಂತಿಯೂ ಹುಟ್ಟಿಬಿಡುತ್ತಿದ್ದವು; ಮತ್ತು ಸತ್ಯದಿಂದ ದೂರ ಹೋಗುತ್ತಿದ್ದೇನೆಂದೂ, ಕತ್ತಲೆಯ ಬಳಿಸಾರಿದ್ದೇನೆಂದೂ ತಿಳಿದು ಬರುತ್ತಿತ್ತು.

---

# ೧೫. ಕಿತ್ತಲಾರದ ಕೊರಡು.

ಒಕ್ಕಲಿಗರು ಕಲಿತವರಲ್ಲವೆಂಬ ಕಾರಣದಿಂದ ಮೇಲಿಂದಮೇಲೇ ನಾನು ಅವರನ್ನು ತಿರಸ್ಕರಿಸಿದ್ದೆನು. ಆದರೆ ನನಗೆ ಸುಳ್ಳು ಬುರುಡೆ ಯೆಂದು ತೋರುವ ಸಿದ್ಧಾಂತಗಳು ಅವರಿಗೆ ಹಾಗೆ ದೋಷ ಮಿಶ್ರ ವಾಗಿ ಕಾಣುತ್ತಿರಲಿಲ್ಲ. ಮದ್ಯೆವಿಯಾದ ನನಗೊಬ್ಬನಿಗೆ ಮಾತ್ರ ಹಾಗೆ ತೋರುತ್ತಲಿದ್ದಿತು.

ಈ ಸ್ಥಿತಿಯಲ್ಲಿ ನಾನು ಮೂರು ವರುಷ ಇದ್ದೆ. ಆ ಅವಧಿಯಲ್ಲಿ ನಾನು ಧಾರ್ಮಿಕ ಸತ್ಯದ ಬಗೆಗೆ ವಿದ್ಯಾರ್ಥಿಯಂತಿದ್ದೆನು. ಆಗ ಇಂಥ ವೈಷಮ್ಯಗಳು ನನಗೆ ಕಡಿಮೆಯಾಗಿ ಬಾಧಿಸುತ್ತಿದ್ದವು. ನನಗೇನೂ ತಿಳಿಯದಂತಾದಾಗ ನಾನು ಅಂದುಕೊಳ್ಳುತಿದ್ದದ್ದೇನಂದರೆ— 'ಅದು ನನ್ನದೇದೋಷ. ನಾನು ಪಾಪಿಯಾಗಿದ್ದೇನೆ.'' ಆದರೆ ಸತ್ಯಗಳ ಆಧಾರ ದಿಂದಲೇ ನಾನು ಬದುಕುವುದಕ್ಕೆ ಮೊದಲು ಮಾಡಿದ ಹಾಗೆಲ್ಲ ಆ ವೈಷ ಮ್ಯಗಳ ಕಾಟವು ಹೆಚ್ಚುಹೆಚ್ಚಾಗುತ್ತ ಬಂತು.

ಸಂದೇಹ ಸಂಕಟಗಳಲ್ಲಿದ್ದಾಗಲೂ ಕೂಡ ನಾನಿನ್ನೂ ಸನಾತನ ಕ್ರಿಸ್ತೀ ಧರ್ಮದಲ್ಲಿ ( **Orthodox Church** ) ಇದ್ದೆ. ಆದರೆ ಅತ್ಯಾ ವಶ್ಯಕವಾಗಿ ಬಿಡಿಸಲೇಬೇಕೆಂದು ತೋರುವ ಪ್ರಶ್ನೆಗಳು ಏಳುತ್ತಲೆ ಇದ್ದವು. ಪ್ರಾರ್ಥನಾ ಮಂದಿರವು ಹೇಳಿಕೊಡುವ ಉತ್ತರಗಳಿಂದ ನನಗೆ ಸಂತೋಷವಾಗಲಿಲ್ಲ. ಕಡೆಗೆ ಧರ್ಮ ಸಂಸ್ಥೆಯನ್ನು ಬಿಟ್ಟುಕೊಡುವು ದಕ್ಕೆ ಬಾಧ್ಯನಾದೆ. ನನ್ನ ಪ್ರಶ್ನವೇನಂದರೆ— ಸನಾತ ಕ್ರಿಸ್ತೀ-ಧರ್ಮಕ್ಕೂ, ಕ್ಯಾಥೋಲಿಕ್ ಮೊದಲಾದ ಉಳಿದ ಕ್ರೈಸ್ತ ಪಂಥಗಳಿಗೂ ಸಂಬಂಧವೇನಿದೆ? ಈ ಸಂಶಯದ ಸಲುವಾಗಿ ನನಗೆ ಭಿನ್ನಭಿನ್ನ ಪಂಗಡ ಗಳ ಧರ್ಮಾನುಯಾಯಿಗಳಾದ ವಿದ್ವಾಂಸರನ್ನು ಕಾಣುವ ಸೌಭಾಗ್ಯ ವುಂಟಾಯ್ತು. ಅವರಲ್ಲಿಯ ಬಹು ಜನರು ನಿಜವಾದ ಧಾರ್ಮಿಕ

ರಾಗಿದ್ದರು. ನಾನು ಆ ಜನರಲ್ಲಿ ಬಂಧುಭಾವವನ್ನು ಬೆಳಿಸಬೇಕೆಂದೆ.
ಆದರೆ ಅದರ ಪರಿಣಾಮವು ಏನಾಯಿತು? ಮನುಷ್ಯರಲ್ಲಿ ಬಂಧು ಭಾವ
ವನ್ನು ಪ್ರಸಾರಗೊಳಿಸುವಂಥವುಗಳೆಂದು ನಾನು ತಿಳಿದುಕೊಂಡ ಸಿದ್ಧಾಂತ
ಗಳು ಕಾರ್ಯರೂಪದಲ್ಲಿ ಇದಕ್ಕೆ ವಿಪರೀತವಾಗಿಯೇ ಪರಿಣಮಿಸಿದ್ದವು.
"ಪ್ರತಿಯೊಂದು ಧರ್ಮದವನು ತನ್ನ ಧರ್ಮವನ್ನು ಅನ್ಯಧರ್ಮಕ್ಕಿಂತ
ಹೆಚ್ಚು ಸತ್ಯವೆಂದು ಭಾವಿಸುತ್ತಾನೆ. ಅಲ್ಲದೆ ಹಾಗೆಯೇ ನಾನು ಸತ್ಯ
ವನ್ನು ಬಲ್ಲೆನೆಂದು ಹೆಮ್ಮೆಪಡುತ್ತಿರುತ್ತಾನೆ." ಎಂದು ತಿಳಿದು ಬಂತು.
ಸನಾತನ ಕ್ರಿಸ್ತಿಗಳು ಅನ್ಯಪಂಥದವರನ್ನು ಪಾಖಂಡಿಗಳೆಂದು ಬಗೆಯು
ತ್ತಾರೆ. ಅದರಂತೆ ಕ್ಯಾಥೋಲಿಕ್‌ರೂ, ಮತ್ತೆ ಬೇರೆಯವರೂ ಇವರನ್ನು
ಪಾಖಂಡಿಗಳೆಂದು ಭಾವಿಸುತ್ತಾರೆ. ನಾನು ಇನ್ನೂ ಕಂಡುದೇನಂದರೆ—
ಪ್ರತಿಯೊಂದು ಧರ್ಮದ ಅನುಯಾಯಿಗಳು ತಮ್ಮ ಮತ ವಿಶೇಷದ
ಬಾಹ್ಯಾಚಾರದಂತೆ ನಡಕೊಳ್ಳದವರೆನ್ನೆಲ್ಲ ಪಾಖಂಡಿಗಳೆಂದು ಎಣಿಸು
ತ್ತಾರೆ. ಸನಾತನ ಕ್ರಿಸ್ತೀ ಧರ್ಮವೇನೋ ಈ ಮಾತನ್ನು ಸ್ವಲ್ಪ
ಮಟ್ಟಿಗೆ ಬಚ್ಚಿಡುತ್ತದಾದರೂ ಅದರ ಹಾಡೂ ಇದೆ. ಇದು ಒಳ್ಳೆಯ
ದಲ್ಲ. ಯಾಕೆಂದರೆ ಒಬ್ಬನು ಮತ್ತೊಬ್ಬನಿಗೆ, **ನಾನು ಸತ್ಯವಂತ, ನೀನು
ಅಯೋಗ್ಯನೆಂದೆನ್ನುವಂಥ ಕೆಟ್ಟಮಾತು ಮುಖ್ಯವಾಗಿ ಜಗತ್ತಿನಲ್ಲಿ ಇನ್ನಾ
ವುದೂ ಇಲ್ಲ.** ಇನ್ನೊಂದಾವುದೆಂದರೆ— ತನ್ನ ಮಕ್ಕಳನ್ನೂ, ಸಂಬಂಧಿ
ಕರನ್ನೂ ಪ್ರೀತಿಸುವ ಮನುಷ್ಯನು ಅವರು ಇನ್ನೊಂದು ಮತದ ಅನು
ಯಾಯಿಗಳಾಗಬೇಕೆಂದ ಕೂಡಲೇ ಅವರನ್ನು ಹಗೆಗಳೆಂದೆಣಿಸ ತೊಡ
ಗುವನು. ಇದಲ್ಲದೆ ಕೆಲವರಿಗೆ ಧರ್ಮದ ಪರಿಚಯವು ಹೆಚ್ಚಾಗುತ್ತ
ಬಂದಂತೆ ಅನ್ಯಧರ್ಮದ ಜನರಬಗ್ಗೆ ತಾತ್ಸಾರವೂ ಹೆಚ್ಚುತ್ತ ಬರುತ್ತದೆ.
ಅಂತೂ ಶ್ರದ್ಧೆಯ ಮೂಲಕ ಪ್ರೇಮವು ಉತ್ಪನ್ನವಾಗುವುದಕ್ಕೆ ಪ್ರತಿ
ಯಾಗಿ ಅದು ಹೇಗೆ ನಾಶವಾಗುತ್ತಿರುವದೆಂಬದನ್ನು ನಾನು ಕಂಡೆನು.

ಭಿನ್ನ ಭಿನ್ನ ಮತಗಳು ಪ್ರಚಲಿತವಾಗಿದ್ದ ದೇಶದಲ್ಲಿ ಈ ದೃಶ್ಯವು
ಅಂದರೆ, ಒಂದು ಮತದವರು ಇನ್ನೊಂದು ಮತದವರನ್ನು ತಿರಸ್ಕಾರ
ದೃಷ್ಟಿಯಿಂದ ಕಾಣುತ್ತಿರುವುದು ಚೆನ್ನಾಗಿ ಕಂಡುಬರುತ್ತದೆ. ಒಬ್ಬರ

**ಮನವರಿಕೆಯು ಇನ್ನೊಬ್ಬರ ಮನವರಿಕೆಗೆ ತುಂಬಾ ವಿಪರೀತವಾದಾಗ ಸಾಮಾನ್ಯವಾಗಿ ಎರಡರಲ್ಲಿಯೂ ಸತ್ಯಾಂಶವು ಕಡಿಮೆಯಾಗಿರುತ್ತದೆ.** ಆ ಜನರಿಗೆ ಇದು ತಿಳಿಯದು. ನಾನು ಪ್ರತಿಯೊಂದು ದರ್ಮದ ಪ್ರವರ್ತಕರನ್ನೂ, ಉಪದೇಶಕರನ್ನೂ ಕಂಡಿದ್ದೇನೆ. ಆದರೆ ಎಲ್ಲರೂ ತಮ್ಮ ಧರ್ಮವು ಅನ್ಯಧರ್ಮಕ್ಕಿಂತ ಶ್ರೇಷ್ಠವೆಂದು ಹೇಳುವುದನ್ನು ಕೇಳಿದ್ದೇನೆ. ಈ ಸ್ಥಿತಿಯು ಸೈನ್ಯದೊಳಗಿನ ಕುದುರೆಯ ದಳದ ಅಧಿಕಾರಿಗಳ ವಿಚಾರದಂತಿದೆ. ಅವರು ತಮ್ಮ ಕುದುರೆಯ ದಳವು ಜಗತ್ತಿನೊಳಗಿನ ಎಲ್ಲಾ ಕುದುರೆಯದಳಗಳಿಗಿಂತ ಶ್ರೇಷ್ಠವೆಂದು ತಿಳಿದುಕೊಳ್ಳುತ್ತಿರುತ್ತಾರೆ. ಆದರೆ ಸಾಧಾರಣವಾಗಿ ನಮಗೆಲ್ಲ ಕಾಣುವ ಒಂದು ಮಾತೇನಂದರೆ— "ಕೇವಲ ಕರ್ಮಠ ಕ್ರಿಸ್ತೀಧರ್ಮದಲ್ಲಿಯೇ ಸತ್ಯಾಂಶವೇಕಿದೆ ? ಉಳಿದ ಲ್ಯೂಥೇರಿಯಸ್, ಹಾಗೂ ಕ್ಯಾಥೋಲಿಕ್ ಪಂಗಡಗಳಲ್ಲಿ ಏಕೆ ಇಲ್ಲ ?" ಪ್ರತಿಯೊಂದು ಮತದ ಅನುಯಾಯಿಗಳು ತಮ್ಮ ಮತವು ಸತ್ಯವೆಂದು ಸಿದ್ಧಪಡಿಸುವುದಕ್ಕಾಗಿ ಧಾರ್ಮಿಕ ಹಾಗೂ ಐತಿಹಾಸಿಕ ಸಂಗತಿಗಳನ್ನು ತಿರುವು ಮುರುವು ಮಾಡಿ ಬಿಟ್ಟಿರುತ್ತಾರೆ. ಇದು ಸಮಾಧಾನಕರವಲ್ಲ ಬೇರೆ ಪಂಗಡದವರು ಮತ್ತು ನಾವು ಹೊಂದುವ ಸಂಭವವಿಲ್ಲವೇ ? ಭಿನ್ನ ಭಿನ್ನ ಪಂಥಗಳ ವಿರೋಧಗಳನ್ನು ಹೋಗಲಾಡಿಸಿ ವಾಸ್ತವವನ್ನು ನೆಲೆಗೊಳಿಸುವುದು ಶಕ್ಯವಿಲ್ಲವೇ ? ನಾವು ಆಯಾಮತದವರಿಗೆ— " ನಿಮ್ಮ ಕೆಲವು ಶ್ರದ್ಧೆಗಳಿಗೆ ನಮ್ಮದೇನೂ ವಿರೋಧವಿಲ್ಲ. ಅವುಗಳಲ್ಲಿ ಕೆಲವನ್ನು ನಾವೂ ಆಚರಿಸುವೆವು. ಇನ್ನುಳಿದ ಕೆಲವು ನಿಮ್ಮ ಮಟ್ಟಿಗೆ ಇದ್ದರೆ ಇರಲಿ. ಆ ವಿಷಯದಲ್ಲಿ ನಿಮಗಿದ್ದ ವಿಚಾರಗಳಂತೆ ನೀವು ನಡೆಕೊಳ್ಳಿರಿ. " ಎಂದು ಕೇಳಲಾಗದೋ ?

ಇದಕ್ಕೆ ಧರ್ಮೋಪದೇಶಕರು ಹೇಳುವುದೇನಂದರೆ— " ಹೀಗೆ ಮಾಡುವುದರಿಂದ ನಮ್ಮ ಪೂರ್ವಜರ ಪಾರಮಾರ್ಥಿಕ ಮೌಲಿಕತೆಗೆ ಕುಂದು ಬರುತ್ತದೆ. ಇದರಿಂದ ಒಂದು ಬಗೆಯ ಧರ್ಮಭೇದವು ಹುಟ್ಟುತ್ತದೆ. ಪೂರ್ವಿಕರ ಮೌಲಿಕತೆಯನ್ನು ಕಾಯ್ದುಕೊಂಡಿರುವುದೇ ನಮಗೆ

ಸುರಕ್ಷಿತವಾಗಿದೆ. ಇಲ್ಲದಿದ್ದರೆ ಹಾಗೆ ಮಾಡಿದ ಗ್ರೀಕ್‌ಪಂಥದಂತೆ ಲೋಕಬಾಹಿರರಾಗಬೇಕಾಗುತ್ತದೆ. ”

ಆಗ ನನಗೆಲ್ಲಾ ವಿಚಾರಗಳು ತಿಳಿದುಬಿಟ್ಟವು. ನಾನು ನನ್ನ ಜೀವನಕ್ಕಾಗಿ ಧರ್ಮದ ಸಂಶೋಧದಲ್ಲಿದ್ದೇನೆ. ಆದರೆ ಈ ಜನರು ಲೋಕದ ಕಣ್ಣಿಗೆ ಇಂಗುಹಚ್ಚುವುದಕ್ಕಾಗಿ ಕೆಲವು ತೋರಿಕೆಯ ಧಾರ್ಮಿಕಾಚಾರಗಳನ್ನು ಪಾಲಿಸಬೇಕೆನ್ನುತ್ತಾರೆ. ಈ ಜನರು ಪ್ರಾರ್ಥನಾಮಂದಿರಕ್ಕೆ ಹೋಗಿ ಪಾಪಿಗಳ ಸಲುವಾಗಿಯೂ ಮಾನವಜಾತಿಯ ಸಲುವಾಗಿಯೂ ಎಷ್ಟೋ ಪ್ರಾರ್ಥನೆ ಮಾಡಿದರೂ ನಿಜವಾಗಿ ಅವರು ಸಾಂಸಾರಿಕ ಅಗತ್ಯಗಳಿಗಾಗಿ ಹಾಗೆ ಮಾಡುತ್ತಿರುತ್ತಾರೆ. ಆದ್ದರಿಂದ ಅವರು ಅತ್ಯಾಚಾರಗಳನ್ನು ಕೂಡ ಮಾಡದೆ ನಿರ್ವಾಹವಿರುವದಿಲ್ಲ. ಒಂದೊಕ್ಕೊಂದು ವಿರೋಧಿಸುವ ಎರಡು ಮತಗಳಲ್ಲಿ ಒಂದು ಮತದ ಸಿದ್ಧಾಂತಗಳು ಯೋಗ್ಯ, ಇನ್ನೊಂದರವು ಅಯೋಗ್ಯ ಎಂದಿಟ್ಟು ಕೊಂಡರೂ, ಅಯೋಗ್ಯಸಿದ್ಧಾಂತದವರು ಸಹ ತಮ್ಮ ಜನರ ಸಂಖ್ಯೆಯು ಬೆಳೆಯಲೆಂದೇ ಸದಾ ಪ್ರಯತ್ನಿಸುತ್ತಿರುತ್ತಾರೆ. ಈ ಕಾರ್ಯಕ್ಕೇನಾದರೂ ಅಡ್ಡಿಮಾಡಿದವರ ಪರಿಣಾಮವು ಏನಾಗಬಹುದೆಂದರೆ, ದಂಡ ಹಾಕುವುದು, ಇಲ್ಲವೆ ಸೆರೆಮನೆ ಸೇರುವುದು. ಹಿಂದಕ್ಕೆ ಇಂಥ ಮನುಷ್ಯರನ್ನು ಜೀವಂತವಾಗಿ ಸುಟ್ಟಿದ್ದೂ ಉಂಟು. ಈಗಲಾದರೋ ಈಗಿನ ಕಾಲಕ್ಕೆ ತಕ್ಕಂತೆ ಆಧುನಿಕ ಕಾಲದ ಕಠೋರ ದಂಡನೆಗಳನ್ನು ವಿಧಿಸುತ್ತಾರೆ.

ಹೀಗೆ ಧರ್ಮದ ಹೆಸರಿನಲ್ಲಾಗುತ್ತಿರುವ ಅನಾಹುತಗಳನ್ನು ನೋಡಿ ನಾನು ದಿಗಿಲುಗೊಂಡೆನು. **ಆ ಬಳಿಕ ನಾನು ಅದು ವರೆಗೆ ಅನುಸರಿಸುತ್ತಿದ್ದ ಮತ ಸಂಪ್ರದಾಯದ ಸಂಬಂಧವನ್ನು ಪ್ರಮಾಣಪೂರ್ವಕವಾಗಿ ಕಡಿದುಕೊಂಡು ಬಿಟ್ಟೆನು.**

ಇದಲ್ಲದೆ ಯುದ್ಧ ಹಾಗು ನರಹತ್ಯಗಳೊಡನೆ ಧರ್ಮದ ಸಂಬಂಧ ವಿದ್ದುದನ್ನು ಕಂಡೆ.

# ನಮ್ಮ ಗ್ರಂಥಮಾಲೆಯ ಪೋಷಕರಾದ ಹಿತೈಷಿಗಳು.



ನಮ್ಮ ಗ್ರಂಥಮಾಲೆಗೆ ಪೋಷಕರಾಗಿ ಧನಸಹಾಯವನ್ನು ಮಾಡಿದ ಮತ್ತು ವಾಗ್ದಾನ ಮಾಡಿದ ನಮ್ಮ ಆತ್ಮೀಯರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ.

ವಾಗ್ದಾನ:—

(೧) ಶ್ರೀಮತ್ **ಶಾಂತವೀರ ಸ್ವಾಮಿಗಳು ಬಬಲೇಶ್ವರ,** ಇವರು ಪ್ರತಿ ವರುಷ ಒಂದು ತಾತ್ವಿಕ ಗ್ರಂಥದ ಪ್ರಕಟನೆಯ ಭಾರವನ್ನು ವಹಿಸಿರುವರು.

(೨) ,, **ಸಂಗನಬಸವ ಸ್ವಾಮಿಗಳು ಬಂಥನಾಳ,** ಇವರು ಒಂದು ತಾತ್ವಿಕ ಗ್ರಂಥದ ಪ್ರಕಟನೆಯ ಭಾರವನ್ನು ವಹಿಸಿರುವರು.

(೩) ,, **ಗುರುಪಾದೇಶ್ವರ ತತ್ವಜ್ಞಾನ ಮಂದಿರ ಮೈಂದರಗಿ** ಈ ಸಂಸ್ಥೆಯವರು ಒಂದು ತಾತ್ವಿಕ ಗ್ರಂಥದ ಪ್ರಕಟನೆಯ ಭಾರವನ್ನು ವಹಿಸಿರುವರು.

(೪) ಶ್ರೀಮಾನ್ **ಹ. ಬ. ಕೊಣ್ಣೂರ** ಎಂ. ಎ., ವಿದ್ಯಾರಣ್ಯ ಹಾಯ್‌ಸ್ಕೂಲಿನ ಸಂಸ್ಥಾಪಕರು ವಿಜಾಪೂರ, ಇವರು ನೂರು ರೂಪಾಯಿಗಳ ವಾಗ್ದಾನ ಮಾಡಿರುವರು.

(೫) **ವೀರಶೈವ ತರುಣ ಸಂಘ ಜೋಳಚಗುಡ್ಡ,** ಇವರದು **೨೫. ರೂ.** ಗಳ ವಾಗ್ದಾನ.

(೬) ಶ್ರೀಮಂತ **ರಾ. ಚಿಂ. ನಾಡಗೌಡರು, ಹಲಸಂಗಿ,** ಇವರದು ೨೫ ರೂ. ಗಳ ವಾಗ್ದಾನ.

## ನಗದು ಹಣ ಬಂದದ್ದು:—

೧ ಶ್ರೀ. ಶಿವಲಿಂಗಪ್ಪ ಸರಸಂಬಿ, ಚಡಚಣ. ೨೫—೦—೦

೨ ,, ಎಸ್. ವ್ಹಿ. ಕುಲಕರ್ಣಿ, ಹಲಸಂಗಿ. ೧೫—೦—೦

೩ ,, "ಜಿ. ಟಿ. ಪಿ." .... .... ೫—೦—೦

೪ ,, "ಬಿ. ಎಂ. ಪಿ." ... .... ೫—೦—೦

೫ ,, ಡಾಗಾ ರಾಮಚಂದ್ರ ಸೇಟಿರು ಬನ್ಹಟ್ಟಿ ೫—೦—೦

೬ ,, ಅಬಕಾರ ಚೆನ್ನಮಲ್ಲಪ್ಪನವರು ಬನ್ಹಟ್ಟಿ ೫—೦—೦

೭ ,, ಆರ್. ಎಸ್. ಮುಘಭಾವಿ, ಹಲಸಂಗಿ ೫—೦—೦

---

# ಒಪ್ಪೋಲೆ.

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ನಮ್ಮ ಮಾತು i | ೨ | ದ್ರಾರಿದ್ರ್ಯ | ದಾರಿದ್ರ್ಯ |
| ಪರಿಚಯ ೧ | ೪ | ಕೃರ್ತ | ಕರ್ತೃ |
| ೮ | ೧ | ಶ್ರೇಷ್ಠರೂ? | ಶ್ರೇಷ್ಠರೊ? |
| ಈ ಟಾಲ್‌ಸ್ಟಾಯ್ ಯಾರು. | | | |
| ೨೯ | ೧೭ | ತನ್ನೃಧ್ಯೇಯ | ತನ್ನಧ್ಯೇಯ |
| ಬಾಳಿನಲ್ಲಿ ಬೆಳಕು ೧ | ೧೬ | ೧೮೩೦ | ೧೮೩೮ |
| ೧೨ | ೬ | ಕೃತಿಯು | ಕೃತಿಯ |
| ೧೩ | ೧೯ | ಕಷ್ಟಪಟ್ಟನೆಂಬುದು | ಕಷ್ಟಪಟ್ಟೆನೆಂಬುದು |
| ೧೩ | ೨೩ | ಹೇಗೆ | ಹೀಗೆ |
| ೧೪ | ೯ | ಮುಂದವಯುಲಾರ | ಮುಂದುವರಿಯುಲಾರ |
| ೨೦ | ೧೮ | ಎಂದುಕೊಂಡನು | ಎಂದುಕೊಂಡೆನು |
| ೨೫ | ೧೭ | ಜೀವಿನ | ಜೀವಿನ |
| ೨೭ | ೧೨ | ಧರ್ಯ | ಧೈರ್ಯ |
| ೨೭ | ೧೩ | ಆಲೆನೋಚಿಸುತ್ತ | ಆಲೋಚಿಸುತ್ತ |
| ೨೮ | ೨೫ | ಪರಮೊಚ್ಚ | ಪರಮೋಚ್ಚ |
| ೩೧ | ೧೭ | ಅರ್ಥಶಾಸ್ತ್ರೀಯ | ಅರ್ಥಶಾಸ್ತ್ರೀಯ |
| ೩೩ | ೧೩ | ಶಕ್ಯವಿಲ್ಲ | ಶಕ್ಯವಿಲ್ಲ |
| ೩೮ | ೧೨ | ಪರಗೆನೋತಿಯವಾಗಿ | ಪರಮೋತಿಯವಾಗಿ |
| ೪೧ | ೫ | ಹೇಗಾದೂ | ಹೇಗಾದರೂ |
| ೪೫ | ೧೭ | ಸ್ವಲ್ಲ | ಸ್ವಲ್ಪ |
| ೫೨ | ೮ | ಅಕಾ | ಅಕ್ಕ |
| ೫೩ | ೨ | ವಿಭಿನ್ನ | ವಿಭಿನ್ನ |
| ೫೫ | ೫ | ಅನಿಸಿ | ಅನಿಸಿ |
| ೫೭ | ೧ | ಮಾನವಕೋಟಿಯ | ಮಾನವಕೋಟಿಯು |
| ೬೩ | ೩ | ನಾನು ನನ್ನಲ್ಲಿ | ನನ್ನಲ್ಲಿ |
| ೬೭ | ೫ | ಕಳಿತುಕೊಂಡು | ಕಾಳಿತುಕೊಂಡು |
| ೭೦ | ೨೦ | ನನ್ನೊಬ್ಬರು | ನನ್ನನ್ನೊಬ್ಬರು |
| ೭೧ | ೪ | ಕಳೆಸಿದನೆಂದು | ಕಳಿಸಿದೆನೆಂದು |
| ೭೩ | ೧೯ | ಕ್ಷಣಗಲೆಲ್ಲಾ | ಕ್ಷಣದಲೆಲ್ಲಾ |
| ೭೬ | ೨೨ | ರುಚಿಸಿದ | ರುಚಿಸದ |
| ೮೬ | ೧೨ | ನಡಕೊಳ್ಳವದರನ್ನೆಲ್ಲ | ನಡಕೊಳ್ಳದವರನ್ನೆಲ್ಲ |
| ೯೩ | ೨ | ಇನ್ನೊಂದರ | ಇನ್ನೊಂದರ |
| ೯೩ | ೩ | ತೊಡಗಿದನು | ತೊಡಗಿದೆನು. |